## ಅಮಿತ್ ಗಣಿತದಲ್ಲಿ ಬಹಳ ಜಾಣ.
## ಅವನ ಕ್ಯಾಮೆಲ್ ಜಾಮೆಟ್ರಿ ಪೆಟ್ಟಿಗೆ ಕೂಡ ಹಾಗೆಯೆ.

camel
SCHOLAR 1029
MATHEMATIC
DRAWING
INSTRUMEN

## ಕಳೆದ ಎರಡು ವರ್ಷಗಳಿಂದ ಅವನು
## ಅದರ ಜೊತೆಗೆ ಕೆಲಸ ಮಾಡಿಕೊಂಡು ಇದ್ದಾನೆ.

ಬಾಳಿಕೆ ಬರುವಂತೆ ಕ್ಯಾಮೆಲ್ ಜಾಮೆಟ್ರಿ ಸೆಟ್‌ಗಳು ತಯಾರಿಸಲ್ಪಡುತ್ತವೆ. ಅವು ಗಟ್ಟಿಮುಟ್ಟಾಗಿವೆ, ಎಷ್ಟು ಒರಟಾಗಿ ಉಪಯೋಗಿಸಿದರೂ ಅವು ಹಾಳಾಗುವುದಿಲ್ಲ.

ಮಾತ್ರವಲ್ಲ, ಅವು ಅತ್ಯಂತ ನಿಷ್ಕೃಷ್ಟವಾಗಿರುತ್ತವೆ. ಆದುದರಿಂದ ಗಣಿತದಲ್ಲಿ ಯಶಸ್ವಿಯಾಗಲು ನಿಷ್ಕೃಷ್ಟತೆ ಬಹಳ ಮುಖ್ಯ ಎಂಬುದನ್ನು ನಿಮ್ಮ ಮಗ ಕಲಿಯುತ್ತಾನೆ.

ಇದಕ್ಕೆಲ್ಲ ಸ್ವಲ್ಪ ಹೆಚ್ಚು ಖರ್ಚಾಗುತ್ತದೆ. ಆದರೆ, ಒಮ್ಮೊಮ್ಮೆ, ಹಣ ಉಳಿಸುವುದಕ್ಕೂ ನೀವು ಸ್ವಲ್ಪ ಹೆಚ್ಚು ಹಣ ಕೊಡಬೇಕಾಗುತ್ತದೆ. ಕ್ಯಾಮೆಲ್ ಎಂದರೆ ದೀರ್ಘಾವಧಿಯ ಧನ ವಿನಿಯೋಗ. ಮತ್ತು ದೀರ್ಘಾವಧಿಯ ಉಳಿತಾಯ.

**ಕ್ಯಾಮೆಲ್** ಜಾಮೆಟ್ರಿ ಪೆಟ್ಟಿಗೆ



ಕ್ಯಾಮ್ಲಿನ್ ಪ್ರೈವೇಟ್ ಲಿಮಿಟೆಡ್,
ಆರ್ಟ್ ಮಟೀರಿಯಲ್ ಡಿವಿಜನ್,
ಬೊಂಬಾಯಿ-400 039 (ಭಾರತ)

VISION/KAN/811

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಅಧಿಕಾರ ಬಂದಾಗ ಅದನ್ನು ನಿರ್ವಹಿಸಬೇಕಾದ ಅಧಿಕಾರಿಗೆ, ತನ್ನ ಅಧಿಕಾರದ ಅಳವಿನೊಳಗೆ ಮುಖ್ಯವಾದ ಬಾಧ್ಯತೆ ಇರುತ್ತದೆ. ಅದಕ್ಕೆ ತಕ್ಕ ದೊಡ್ಡ ಮನಸ್ಸು ಇರಬೇಕು. ಅಧಿಕಾರಿಗೆ ತಕ್ಕ ದರ್ಪ ಬೇಕಾದುದು ನಿಜವಾದರೂ, ಅದು ಮದವಾಗಿ ಮಾರ್ಪಡಬಾರದು. ಅದರ ಬದಲಾಗಿ ಅಲ್ಪಬುದ್ಧಿಯ ಅಧಿಕಾರಿಗೆ ಲಾಭಬಡಕ ಗುಣ ಬಂದುಬಿಡುವುದೂ ಉಂಟು. ಲಾಭ ಬಂದ ಹಾಗೆ ಆಸೆ ಹೆಚ್ಚುತ್ತದೆ. ಕಡೆಗೆ ಯಾವ ಪರಿಣಾಮಕ್ಕೆ ಮುಟ್ಟುತ್ತದೆನ್ನಲು ಈ ಸಂಚಿಕೆಯಲ್ಲಿರುವ "ಅಧಿಕಾರದ ದುರ್ವಿನಿಯೋಗ" ಎಂಬ ಕಥೆಯಲ್ಲಿ ನೋಡಬಹುದು.

## ಅಮರವಾಣಿ

**ಅತೀತ್ಯ ಸ್ವಾರ್ಹತಾಂ ಕೋಽಪಿ ಲಭತೇನಾಧಿಕಂ ಫಲಮ್**
**ಸ್ವಲ್ಪ ಮೇವಾಂಬು ಲಭತೇ ಪ್ರಸ್ಥಃ ಪ್ರಾಪ್ಯಾಪಿ ಸಾಗರಮ್**

ಯಾವನಿಗೂ ತನ್ನ ಅರ್ಹತೆಯನ್ನು ಮೀರಿದ ಫಲವು ಲಭ್ಯವಾಗದು. ಬಿಂದಿಗೆ ಮಹಾಸಮುದ್ರಕ್ಕೆ ಹೋದರೂ ಅದಕ್ಕೆ ಲಭಿಸುವುದು ಬಿಂದಿಗೆ ನೀರೇ ಹೊರತು ಹೆಚ್ಚಾಗಿ ಸಿಗದು.

---

ಸಂಪುಟ : ೨೧ ಅಕ್ಟೋಬರ್ '೮೩ ಸಂಚಿಕೆ : ೪

---

ಬಿಡಿ ಪ್ರತಿ ರೂ. ೧-೦೦ :: ವಾರ್ಷಿಕ ಚಂದಾ ರೂ. ೧೪-೦೦



## ಚಂದಮಾಮನ ಹರಟೆ




### ಪ್ರಾಣಿಗಳ ಸ್ವರಸಂಗ್ರಹ

ಮಾಸ್ಕೋ ವಿಶ್ವವಿದ್ಯಾಲಯದ ಜೀವಶಾಸ್ತ್ರ ವಿಭಾಗವು ಇತ್ತೀಚೆಗೆ ಮೂರು ಸಾವಿರಕ್ಕೂ ಹೆಚ್ಚಿನ ಪ್ರಾಣಿಗಳ ಸ್ವರಗಳನ್ನು ರಿಕಾರ್ಡು ಮಾಡಿ ಭದ್ರಪಡಿಸಿದೆ. ಪ್ರಾಣಿ, ಪಕ್ಷಿ, ಕ್ರಿಮಿಕೀಟಕಾದಿ ಸರ್ವಪ್ರಾಣಿ ಕೋಟಿಗಳ ಸ್ವರಗಳನ್ನು ಶೇಖರಿಸಿಕೊಳ್ಳುವುದರಿಂದ ಪ್ರಯೋಜನವೇನು ? ನಿದ್ರೆ ಇಲ್ಲದೆ ನರಳುವ ರೋಗಿಗಳಿಗೆ ಚಿಕಿತ್ಸೆ ಮಾಡುವಾಗ ಈ ಪ್ರಾಣಿ ಪಕ್ಷಿಗಳ ಸ್ವರಗಳು ಬಹಳ ಉಪಯೋಗಪಡುತ್ತವೆಂದು ವೈದ್ಯವೇತ್ತರು ಹೇಳುತ್ತಾರೆ. ಈ ಬೇರೆ ಬೇರೆ ಸ್ವರಗಳು ಮನುಷ್ಯನ ಮಿದುಳನ್ನು ಎಷ್ಟೋ ಪ್ರಭಾವಿತಗೊಳಿಸುವುದೆಂದು ಇವರು ಅಭಿಪ್ರಾಯಪಡುತ್ತಾರೆ.

### ಸವೆಯುತ್ತಿರುವ ಸೂರ್ಯಗೋಳ !

ಸೂರ್ಯಗೋಳವು ತನ್ನ ಪ್ರಜ್ವಲನೆಗಾಗಿ ಸೆಕೆಂಡಿಗೆ ತನ್ನಿಂದ ಹೆಚ್ಚು ಕಡಿಮೆ ನಲುವತ್ತು ಲಕ್ಷ ಟನ್ನು ಪದಾರ್ಥವನ್ನು ಉಪಯೋಗಿಸಿಕೊಳ್ಳುತ್ತದೆಂದು ಒಂದು ಸಂಶೋಧನೆಯಿಂದ ತಿಳಿದು ಬಂದಿದೆ. ಇದರಿಂದ ಸೂರ್ಯಗೋಳಕ್ಕೆ ಅಂತ್ಯವು ಸಮೀಪಿಸುವುದೋ ಅಂದರೆ ಇಲ್ಲ; ಏಕೆಂದರೆ ಈ ಲೆಕ್ಕದಲ್ಲಿ ಬರುವ ಆರು ಲಕ್ಷ ಕೋಟಿ ಸಂವತ್ಸರಗಳಲ್ಲಿ ಸೂರ್ಯಗೋಳವು ಸ್ವಾಹಾ ಮಾಡುವುದು ತನ್ನೊಳಗಿನ ನೂರ ನಲುವತ್ತು ಸಾವಿರದೊಂದು ಭಾಗ ಪದಾರ್ಥವನ್ನು ಮಾತ್ರವೇ !



### ಕೂಸು ಹುಟ್ಟಿತು !



ಕೂಸು ಹುಟ್ಟುವುದೊಂದು ವಿಶೇಷವೆ ? ಹೌದು. ಆ ಕೂಸು ಯಾವ ಯುವರಾಜನಿಗೋ, ಯುವರಾಣಿಗೋ ಹುಟ್ಟಿದರೆ ವಿಶೇಷ ತಾನೆ ? ಆದರೆ ಈ ಕೂಸು ಅಂತಹವರಾರಿಗೂ ಸೇರಿದುದಲ್ಲ. ನಿಜಕ್ಕೂ ಈ ಕೂಸಿನ ತಾಯಿ-ತಂದೆಯರ ಹೆಸರೂ ತಿಳಿಯದು. ಆದರೆ ಇದರಲ್ಲಿ ವಿಶೇಷವೇನಿದೆ ? ಅಂಡಮಾನ್ ದ್ವೀಪದಲ್ಲಿಯ ಸಣ್ಣ ಸಣ್ಣ ಅಡವಿಗಳಲ್ಲಿ, ಗೂಡಿನಂತಹ ಗುಡಿಸಲು ಕಟ್ಟಿಕೊಂಡು ವಾಸಮಾಡುವ ಓನ್‌ಜೆಸ್ ಎಂಬ ಆಟವಿಕ ಜಾತಿ ಕ್ರಮಕ್ರಮವಾಗಿ ನಿರ್ಮೂಲವಾಗುತ್ತಾ ಬರುವುದೆಂದು ಹೇಳುತ್ತಾರೆ. ಇದು ವರೆಗೆ ಆ ಜಾತಿಯವರೆಲ್ಲ ಮೊತ್ತ ತೊಂಬತ್ತೇಳು ಮಂದಿ. ಈಗ ಹುಟ್ಟಿದ ಕೂಸಿನೊಂದಿಗೆ ತೊಂಬತ್ತೆಂಟು ಮಂದಿ ಮಾತ್ರವೇ.

## ನಿಮಗೆ ಗೊತ್ತೇ?

೧. ಭಾರತ ದೇಶಕ್ಕೆ ಬಂದ ಮೊದಲನೇ ಗ್ರೀಕು ರಾಯಭಾರಿ ಯಾರು? ಆ ರಾಯಭಾರಿಯನ್ನು ಕಳುಹಿಸಿದ ಗ್ರೀಕು ರಾಜನ ಹೆಸರೇನು ?

೨. ಭಾರತವನ್ನು ಜಯಿಸಬೇಕೆಂದು ಪ್ರಯತ್ನಿಸಿ ವಿಫಲನಾದ ಪರ್ಷಿಯಾ ರಾಜನ ಹೆಸರೇನು ?

೩. ಭಾರತದ ಭೂಭಾಗವನ್ನು ಸ್ವಲ್ಪ ತನ್ನ ರಾಜ್ಯಕ್ಕೆ ಬೆರೆಸಿಕೊಂಡ ಪರ್ಷಿಯಾ ರಾಜನು ಯಾರು ?

೪. ಪೂರ್ವ ಸಮುದ್ರ ತೀರದಲ್ಲಿ ಈಸ್ಟಿಂಡಿಯಾ ಕಂಪೆನಿ ನಿರ್ಮಿಸಿದ ಎರಡು ಕೋಟೆಗಳು ಯಾವುವು ?

೫. ವೀರಾಧಿವೀರನಾಗಿ ಚರಿತ್ರ ಪ್ರಸಿದ್ಧಿ ಪಡೆದ ಒಬ್ಬ ರಾಜನಿಗೆ ಮಕ್ಕಳೆಂದರೆ ಬಹಳ ಭಯ. ಆ ರಾಜನು ಯಾರೆಂದು ನಿಮಗೆ ಗೊತ್ತೇ ?

(ಉತ್ತರ ೬೪ ನೇ ಪುಟದಲ್ಲಿ)



# ಅತಿ ನಿಧಾನ

ರಘುವೀರನೆಂಬವನು ಜಮೀನ್ದಾರರೊಬ್ಬರ ಮನೆಯಲ್ಲಿ ಆಳಾಗಿ ದುಡಿಯುತ್ತಿದ್ದನು. ಅವನು ಸಾಧಾರಣದ ಆಳಾಗಿರದೆ, ಜಮೀನುದಾರರಿಗೆ ಕರೆದ ಬಾಯಿಗೆ ಬೇಕಾದವನಾಗಿ, ಅವರ ಎಲ್ಲಾ ಕಾರ್ಯಗಳೂ ಅವನ ಮೂಲಕವೇ ನಡೆಯುತ್ತಿದ್ದುವು. ಅವನು ಜಮೀನ್ದಾರರು ಕೊಡುವುದರಲ್ಲಿ ತೃಪ್ತಿಪಡುತ್ತ ವಿಶ್ವಾಸವಾಗಿದ್ದನು, ಆದರೆ ಅವನಿಗೆ ಆ ಮನೆಯ ಕೆಲಸ ಕತ್ತಿಯ ಮೇಲೆ ಸಾಮು ಮಾಡಿದಂತೆ ಆಗುತ್ತಿತ್ತು.

ಜಮೀನ್ದಾರರೇನೋ ಬಹಳ ಒಳ್ಳೆಯವರೇ. ರಘುವೀರನ ಕುಟುಂಬವನ್ನು ಅವರು ಸ್ವಂತ ಕುಟುಂಬದಂತೆಯೇ. ನೋಡುತ್ತ ಆದರಿಸುತ್ತಿದ್ದರು. ಅದರಲ್ಲಿ ಯಾವ ಕೊರತೆಯೂ ಇಲ್ಲ. ಆದರೆ ಜಮೀನ್ದಾರರು ಬಹಳ ನಿಧಾನದ ಬುದ್ಧಿಯವರು. ಎಂತಹ ಪರಿಸ್ಥಿತಿಯಲ್ಲಿಯೂ, ತಲೆಯ ಮೇಲೆ ಸಿಡಿಲೇ ಬೀಳುವಂತಿದ್ದರೂ ಏನೂ ಆಗದವರಂತೆ ಪ್ರಶಾಂತರಾಗಿರುತ್ತಾರೆ. ಯಾವುದಕ್ಕೂ ಅವಸರ ಪಡಲಾರರು. ಗಡಿಬಿಡಿ ತೋರಿಸಲಾರರು. ಹಾಗೆಂದ ಮಾತ್ರಕ್ಕೆ ಯಾವುದನ್ನೂ ಬಿಡುವವರಲ್ಲ. ಅವರಿಗೆ ಎಲ್ಲ ವ್ಯವಹಾರಗಳೂ ಬೇಕು.

ಆ ಊರಿನಲ್ಲಿ ಸೋಮಯ್ಯನೆಂಬ ರೈತನ ಮಗಳಿಗೆ ಮದುವೆ ನಿಶ್ಚಯವಾಯಿತು. ಆ ಮದುವೆಗೆ ಚಪ್ಪರ ಹಾಕಿಕೊಡುತ್ತೇನೆಂದು ಜಮೀನ್ದಾರರು ಸೋಮಯ್ಯನಿಗೆ ಹೇಳಿದರು. ಮದುವೆಯ ದಿನ ಹತ್ತಿರ ಬಂದರೂ ಚಪ್ಪರದ ಏರ್ಪಾಡು ಕಾಣದಿರಲು, ಸೋಮಯ್ಯನು ರಘುವೀರನ ಸುತ್ತಲೂ ತಿರುಗತೊಡಗಿದನು. ರಘುವೀರನು ಜಮೀನ್ದಾರರೊಂದಿಗೆ ಆ ಚಪ್ಪರದ ಸಂಗತಿ ಹೇಳಿದರೆ, "ಅವಸರವೇನೋ? ಮದುವೆಗೆ ಇನೂ ವ್ಯವಧಿಯಿದೆಯಷ್ಟೆ ?" ಎನ್ನುತ್ತಿದ್ದರು.

ಕಡೆಗೆ ಮದುವೆಯ ಗಂಡಿನವರು ಆ ಊರಿಗೆ ಬಂದು ಸೇರಿದ ಮೇಲೆ, ಅವರ ಕಣ್ಣೆದಿರಿನಲ್ಲಿ ಸೋಮಯ್ಯನ ಮನೆಯಲ್ಲಿ ಚಪ್ಪರ ಹಾಕುವ ಕೆಲಸ ನಡೆಯಿತು. ವರನ ಕಡೆಯವರು ಸೋಮಯ್ಯನನ್ನು ಕಡಿಮೆ ಮಾತುಗಳಿಂದ ಏನೇನೋ ನಿಂದಿಸಿದರು.

ಸೋಮಯ್ಯನು ಅವರಿಗೆ ನಡೆದ ಸಮಾಚಾರವನ್ನು ಹೇಳಿ, "ನಮ್ಮ ಜಮೀನ್ದಾರರು ಚಪ್ಪರದ ಕೆಲಸ ತನ್ನದೆಂದು ಹೇಳಿದ ಮೇಲೆ, ಬೇಡವೆಂದು ಹೇಳಿ ನನ್ನಷ್ಟಕೆ ನಾನೇ ಹಾಕಿಸಿಬಿಟ್ಟರೆ, ಮತ್ತೆ ಈ

ಜೆ. ರಾಮಲಕ್ಷ್ಮಿ.



ಊರಿನಲ್ಲಿ ಬದುಕಲು ಸಾಧ್ಯವೆ ? ಆದರೂ ಅವರು ಬಹಳ ಒಳ್ಳೆಯವರೇ. ಅವರ ವ್ಯವಹಾರವೆಲ್ಲಾ ನೋಡಿಕೊಳ್ಳುವವನು ಆಳು ರಘುವೀರ. ದೇವರು ವರಕೊಟ್ಟರೂ ಪೂಜಾರಿ ಕೊಡನೆಂಬ ಹಾಗೆ ಅವನು ಎಲ್ಲದಕ್ಕೂ ನಿಧಾನ ಮಾಡುತ್ತಾನೆ. ಏನು ಮಾಡುವುದು ? ಕ್ಷಮಿಸಿಕೊಳ್ಳಿ" ಎಂದು ಕೇಳಿಕೊಂಡನು.

ತಪ್ಪು ಜಮೀನ್ದಾರರದೆಂದು ಗೊತ್ತಿದ್ದರೂ ಯಾರೂ ಆ ಮಾತು ಬಾಯಿಬಿಟ್ಟು ಹೇಳಲಾರರು. ಅವರೆಲ್ಲಾ ರಘುವೀರನ ಮೇಲೆಯೇ ತಮ್ಮ ಕೋಪ ತೀರಿಸಿಕೊಳ್ಳುತ್ತಾರೆ. ಇದು ರಘುವೀರನಿಗೆ ಬಹಳ ಬಾಧೆಯನ್ನುಂಟುಮಾಡುತ್ತಿತ್ತು.

ರಘುವೀರನ ಕಾರಣದಿಂದ ತನ್ನ ಮರ್ಯಾದೆ ನಿಂತು ಕೊಂಡಿದೆ ಎಂಬ ಸಂಗತಿ ಜಮೀನ್ದಾರರಿಗೂ ಗೊತ್ತಿತ್ತು. ಆದುದರಿಂದ ಅವರು ಅವನನ್ನು ಆತ್ಮೀಯನ ಹಾಗೆ ನೋಡಿಕೊಳ್ಳುತ್ತಿದ್ದರು.

ಒಂದು ಸಾರಿ ಆ ದೇಶದ ರಾಜನು ಪಕ್ಕದ ಗ್ರಾಮದ ಮೇಲಿಂದಾಗಿ ಬೇಟೆಗೆ ಹೋಗುವನೆಂದು ಗೊತ್ತಾಯಿತು. ಜಮೀನ್ದಾರರು ಕೂಡಲೇ ರಘುವೀರನೊಂದಿಗೆ ಮಹಾರಾಜನಿಗೆ ತಮ್ಮ ಗ್ರಾಮದಲ್ಲಿ ಬಿಡದಿಯನ್ನು ಏರ್ಪಡಿಸಬೇಕೆಂದು ಹೇಳಿದನು.

"ಬೇಡ ಸ್ವಾಮಿ. ಮಹಾರಾಜರು ಬಹಳ ಕೋಪದವರೆಂದು ಕೇಳಿದ್ದೇನೆ. ಏರ್ಪಾಡಿನಲ್ಲಿ ಏನಾದರೂ ಸಣ್ಣ ಕೊರತೆ ಬಂದು ಬಿಟ್ಟರೆ ನಮಗೆ ಗಲ್ಲಿನ ಶಿಕ್ಷೆಯಾದೀತು" ಎಂದನು ರಘುವೀರ ಹೆದರುತ್ತ.

"ನಮ್ಮ ಏರ್ಪಾಡಿನಲ್ಲಿ ಕೊರತೆ ಏಕೆ ಬರುತ್ತದೆ?" ಎಂದು ಜಮೀನ್ದಾರರು ತುಸು ಕೋಪದಿಂದ ಕೇಳಿದರು. ರಘುವೀರನು ಮತ್ತೇನೂ ಮಾತಾಡಲಿಲ್ಲ. ಜಮೀನ್ದಾರರ ಸ್ವಾಗತ ವಾರ್ತೆ ಮಹಾರಾಜನಿಗೆ ಹೋಯಿತು. ರಾಜನು ಅಲ್ಲಿಗೆ ಬರಲು ಸಂತೋಷದಿಂದ ಒಪ್ಪಿಗೆ ತಿಳಿಸಿದನು. ಬೇಟೆಯಿಂದ ಹಿಂದಿರುಗಿ ಹೋಗುವಾಗ ಜಮೀನುದಾರರ ಆ ಗ್ರಾಮದಲ್ಲಿ ತುಂಗುವುದಾಗಿ ಹೇಳಿದನು. ರಘುವೀರನ ಗುಂಡಿಗೆಯಲ್ಲಿ ಕಲ್ಲು ಬಿದ್ದಹಾಗಾಯಿತು.

ಜಮೀನ್ದಾರರಿಗೆ ಒಬ್ಬ ಬಾವ ಮೈದುನನಿದ್ದನು. ರಾಜನನ್ನು ತಮ್ಮ ಊರಿಗೆ ಆಹ್ವಾನ ಮಾಡುವುದೆಂದರೆ, ಬೆಂಕಿಯ ಕೊಳ್ಳಿಯಿಂದ ತಲೆತುರಿಸಿಕೊಂಡಂತೆ ಎಂದು ಅವನಿಗೆ ಗೊತ್ತಿತ್ತು. ಅವನು ಮುಂದಾಗಿ ರಾಜನ ಕೆಲಮಂದಿ ಅನುಚರರನ್ನು ಒಳಿತು ಮಾಡಿಕೊಂಡು, ಅವರೊಂದಿಗೆ ತನ್ನ ಬಾವಯ್ಯನು ಯಾವ ಕೆಲಸವನ್ನಾದರೂ ರಘುವೀರನೆಂಬವನಿಗೆ ಒಪ್ಪಿಸುತ್ತಾರೆಂದೂ, ಮಹಾರಾಜರಿಗೆ ಏನಾದರೂ ಲೋಪ ಉಂಟಾದರೆ, ಅದು ಅವನ ಸ್ವಂತ ಬುದ್ಧಿಯಿಂದಾದುದೇ ಹೊರತು ಜಮೀನ್ದಾರರಿಂದಾದುದಲ್ಲವೆಂದೂ, ಈ ವಿಷಯ ಸಮಯ ನೋಡಿ ಮಹಾರಾಜರಿಗೆ ತಿಳಿಸಬೇಕೆಂದೂ ಹೇಳಿದನು. ಅವರೂ ಸರಿ ಎಂದರು.

ಹೀಗೆ ತನ್ನ ಸುದ್ದಿ ರಾಜನ ವರೆಗೆ ಹೋಯಿತೆಂದು ರಘುವೀರನಿಗೆ ತಿಳಿಯದು. ಜಮೀನ್ದಾರರಿಗಾದರೋ ರಾಜನು ತನ್ನ ಊರಿಗೆ ಬರುವನೆಂದು ತಿಳಿದರೂ ಅವರ ನಿಧಾನತೆಯಲ್ಲಿ ಯಾವ ವ್ಯತ್ಯಾಸವೂ ಕಾಣ ಲಿಲ್ಲ. ರಾಜನು ಬರುವ ದಿನವೂ ಬಂದಿತು. ಇನ್ನೂ ರಾಜನ ವಿಶ್ರಾಂತಿ ಭವನದ ಏರ್ಪಾಡು ಮುಗಿಯ ಲಿಲ್ಲ. ಆದರೆ ಪುಣ್ಯವಶಾತ್ ಬೇಟೆಯಲ್ಲಿ ರಾಜನಿಗೆ ಏನೋ ಗಾಯವಾದುದರಿಂದ, ಒಂದು ದಿನ ತಡ ವಾಗಿಯೇ ಬಂದನು. ಆದುದರಿಂದ ಬಿಡದಿಯಲ್ಲಿ ಯಾವ ಲೋಪವೂ ಇಲ್ಲದೆ ಸರಿಯಾಗಿಬಿಟ್ಟಿತು. ತನ್ನ ವಿಶ್ರಾಂತಿಗಾಗಿ ಒಳ್ಳೆಯ ಸೌಕರ್ಯಗಳ ಏರ್ಪಾಡಾಗಿರುವುದನ್ನು ನೋಡಿ ರಾಜನಿಗೆ ಬಹಳ ಸಂತೋಷವಾಯಿತು.



ರಾಜನು ಆ ದಿನ ರಾತ್ರಿಗೆ ತನಗೆ ಏನೇನು ಅಡಿಗೆ ಪದಾರ್ಥಗಳಾಗಬೇಕೆಂಬುದನ್ನು ಜಮೀನ್ದಾರ ರೊಂದಿಗೆ ಹೇಳಿದನು. ಅವರು ಅದನ್ನೆಲ್ಲ ಶ್ರದ್ಧೆ ಯಿಂದ ಕೇಳಿ, ತನ್ನ ಅಡಿಗೆಯವನಿಗೆ ತಿಳಿಸಿದರು. ಅಡಿಗೆಯವನು ಅಡಿಗೇ ಕೋಣೆಗೆ ಹೋಗಿ, ಸ್ವಲ್ಪ ಹೊತ್ತಿಗೆ ಹಿಂದಿರುಗಿ ಬಂದು, "ಮಹಾರಾಜರು ಪದಾರ್ಥಗಳಿಗೆ ಕುಂಕುಮಕೇಸರಿ ಉಪಯೋಗಿಸ ಬೇಕೆಂದು ಹೇಳಿದ್ದಾರೆ. ಅದು ಇಲ್ಲ, ಕೂಡಲೇ ತರಿಸಿಬಿಡಿ" ಎಂದು ಹೇಳಿದನು.

ಈ ಸಂಗತಿಯನ್ನು ಜಮೀನ್ದಾರರು ಮನಸ್ಸಿನಲ್ಲಿಟ್ಟು ಕೊಂಡು ರಾತ್ರಿಯಾದ ಮೇಲೆ ರಘುವೀರನನ್ನು ಕರೆದು ಕುಂಕುಮಕೇಸರಿ ತರಿಸಿ ಅಡಿಗೆಯವನಿಗೆ ಕೊಡಲು ಹೇಳಿ ಹಣ ಕೊಟ್ಟರು. ಅವನು ಊರು ಪೂರಾ ವಿಚಾರಿಸಲು, ಕುಂಕುಮಕೇಸರಿ ನಗರದಲ್ಲಿರುವ ದೊಡ್ಡ ಅಂಗಡಿಯಲ್ಲಿ ಹೊರತು ಬೇರೆ ಎಲ್ಲಿಯೂ ದೊರಕದೆಂದು ಗೊತ್ತಾಯಿತು. ಆಗ ಮಹಾರಾಜನ ಊಟದ ಸಮಯವೂ ಸಮೀಪಿಸಿತು.

ಅಷ್ಟರಲ್ಲಿ ರಾಜನು ಜಮೀನ್ದಾರರಿಗೆ ಇನ್ನೊಂದು ಸಮಾಚಾರ ಕಳುಹಿಸಿದನು. ನಾನು ಬೇಟೆಯಲ್ಲಿ ಗಾಯಗೊಂಡ ಕಾರಣದಿಂದ, ಈಗತಾನೇ ವೈದ್ಯರು ಬಂದು ಊಟದಲ್ಲಿ ಕುಂಕುಮಕೇಸರಿ ಉಪಯೋಗಿಸ ಬಾರದೆಂದು ಹೇಳಿಬಿಟ್ಟರು. ಇಷ್ಟರಲ್ಲಿ ನೀವು ಪದಾರ್ಥಗಳನ್ನು ಮಾಡಿಟ್ಟಿದ್ದರೆ, ನನಗಾಗಿ ಬೇರೆ ಅಡಿಗೆ ಮಾಡಿಸಿಬಿಡಿ. ಸ್ವಲ್ಪ ತಡವಾದರೂ ಚಿಂತೆ ಇಲ್ಲ. ಕಾದಿರುತ್ತೇನೆ."

ಈ ಸಮಾಚಾರ ರಘುವೀರನಿಗೆ ಗೊತ್ತಾಯಿತು. ಅವನ ಜೀವಕ್ಕೆ ಬಹಳ ಸಮಾಧಾನವಾಯಿತು. ಅಡಿಗೆ ಪದಾರ್ಥಗಳೆಲ್ಲ ಕುಂಕುಮಕೇಸರಿ ಇಲ್ಲದೇನೆ ಆಗಲೇ ಸಿದ್ಧವಾಗಿತ್ತು. ಆದುದರಿಂದ ರಾಜನಿಗೆ ಸಕಾಲದಲ್ಲೇ ಭೋಜನ ಬಡಿಸಲಾಯಿತು. ಭೋಜನವು ಸರಿಯಾದ ಹೊತ್ತಿಗೇ ನಡೆದುದನ್ನು ನೋಡಿ ರಾಜನಿಗೆ ಆಶ್ಚರ್ಯವಾಗಿ, ಜಮೀನ್ದಾರರನ್ನು ಬಹಳವಾಗಿ ಮೆಚ್ಚಿಕೊಂಡನು.

ಮರುದಿನ ರಾಜನು ತನಗೆ ನಡೆದ ಆತಿಥ್ಯ ವಿಷಯದಲ್ಲಿ ಬಹಳ ತೃಪ್ತಿಯನ್ನು ವ್ಯಕ್ತಪಡಿಸಿ, ಆ ಗ್ರಾಮಕ್ಕೆ ಇನ್ನೂ ಅನೇಕ ಸದುಪಾಯಗಳನ್ನು ಕಲ್ಪಿಸುವುದಾಗಿ ವಾಗ್ದಾನ ಮಾಡಿದನು. ಆಮೇಲೆ ರಾಜನು ಗ್ರಾಮದ ಹಿರಿಯರನ್ನೆಲ್ಲಾ ಬರಮಾಡಿಸಿ, ಅವರ ಇದಿರಿನಲ್ಲಿ ರಘುವೀರನನ್ನು ಕರೆದು, "ನಿನ್ನನ್ನು ಕುರಿತು ಎಲ್ಲಾ ವಿಷಯ ನನಗೆ ಗೊತ್ತಾಗಿದೆ, ನಿನ್ನಂತಹ ಸಮರ್ಥನನ್ನು ಆಳಾಗಿ ಇಟ್ಟುಕೊಂಡಿರುವ ಈ ಜಮೀನ್ದಾರರೂ, ಗ್ರಾಮಸ್ಥರೂ ಬಹಳ ಅದೃಷ್ಟವಂತರು" ಎಂದು ಮೆಚ್ಚುನುಡಿಯಾಡಿದನು.

ರಾಜನು ಹೊರಟು ಹೋದ ಮೇಲೆ ಊರಿನಲ್ಲಿ ರಘುವೀರನ ಪ್ರಭಾವ ಹೆಚ್ಚಿತು. ಅವನು ಮಹಾರಾಜನ ಅಭಿಮಾನಕ್ಕೆ ಪಾತ್ರನಾದನೆಂದು ತಿಳಿದು, ಎಲ್ಲರೂ ಅವನನ್ನು ಗೌರವಿಸತೊಡಗಿದರು.

ಜಮೀನ್ದಾರರು ಕೂಡಾ ರಘುವೀರನ ಕೈಗಳನ್ನು ಹಿಡಿದುಕೊಂಡು, "ಇಷ್ಟು ಕಾಲ ನಿನ್ನನ್ನು ಹೆತ್ತ ಮಗನ ಹಾಗೆ ಭಾವಿಸಿದೆ. ಇವತ್ತಿನಿಂದ ನಿಜಕ್ಕೂ ನೀನು ನನ್ನ ಮಗನೇ ಆದೆಯಪ್ಪ" ಎಂದರು.

ಆ ಮಾತು ಕೇಳಿ ರಘುವೀರನು ಸಂತೋಷಿಸುವುದಕ್ಕೆ ಬದಲಾಗಿ, ಏನೋ ನೋವನ್ನು ಅನುಭವಿಸುವವನಂತೆ, "ಬೇಡ ಸ್ವಾಮಿ. ನಾನಿನ್ನು ನಿಮ್ಮಲ್ಲಿ ಇರಬಾರದೆಂದು ಮಾಡಿದ್ದೇನೆ. ಯಾವ ನಗರಕ್ಕೋ ಹೋಗಿ ಸ್ವತಂತ್ರವಾಗಿ ಬದುಕಬೇಕೆಂದಿದೆ. ರಾಜನಂಥವರು ಬರುವರಾದರೂ ನಿಮ್ಮ ಅತಿ ನಿಧಾನದ ಗುಣ ಇನ್ನಿಷ್ಟು ಹೆಚ್ಚೇ ಆಗುತ್ತದೆ. ಇನ್ನೊಮ್ಮೆ ನೀವು ಯಾವ ಚಕ್ರವರ್ತಿಗಳನ್ನೋ ಆಹ್ವಾನಿಸುವಿರಿ ಎಂದಿಟ್ಟುಕೊಳ್ಳೋಣ, ಆಗ ನಿಮ್ಮ ಆಳಾಗಿರುವ ನನ್ನ ಗತಿ ಏನಾದೀತೋ, ಊಹಿಸುವಾಗ ಮೈ ಜುಮುಗುಡುತ್ತದೆ" ಎಂದನು.

ಅವನ ಮಾತು ಕೇಳಿ ಜಮೀನ್ದಾರರು ಗಹಗಹಿಸಿ ನಕ್ಕು, "ಎಲೋ ಹುಚ್ಚಾ. ಗ್ರಾಮದ ಪ್ರಮುಖರ ಇದಿರಿನಲ್ಲಿ ಮಹಾರಾಜರು ಆತಿಥ್ಯವಿತ್ತ ನನ್ನನ್ನು ಮಾತ್ರವಲ್ಲದೆ, ನಿನ್ನನ್ನು ಕೂಡಾ ಏಕೆ ಹೊಗಳಿದರೆಂದು ಗೊತ್ತೇ ? ಅವರ ಅನುಚರರು ನನ್ನ ಗುಣವನ್ನು ಕುರಿತು, ರಾತ್ರಿ ನಡೆದುದನ್ನು ಕುರಿತು ಎಲ್ಲವನ್ನೂ ಅವರಿಗೆ ಹೇಳಿದ್ದಾರೆ. ಅಂತಲೇ ಪ್ರತ್ಯೇಕವಾಗಿ ನನ್ನನ್ನು ಎಚ್ಚರಿಸಿದ್ದಾರೆ. ಅತಿ ನಿಧಾನ ಗುಣದಿಂದ ನಿನಗೆ ಅಪವಾದ ಬರುವ ಹಾಗೆ ಮಾಡಕೂಡದೆಂದು ಒತ್ತಿ ಹೇಳಿದ್ದಾರೆ. ಮಹಾರಾಜರ ಎಚ್ಚರಿಕೆಯನ್ನೇ ನಾನು ಪಾಲಿಸದಿದ್ದರೆ ನನ್ನ ಜಮೀನ್ದಾರಿಕೆಗೇ ಮುಪ್ಪು ಬಂದೀತು. ಅರ್ಥವಾಯಿತೇನು?" ಎಂದರು. ಅರ್ಥವಾಯಿತೆಂದು ರಘುವೀರನು ಸಂತೋಷದಿಂದ ತಲೆಯಾಡಿಸಿದನು.






# ಸ್ಥಾನಬಲ

ಮತ್ತೆ ಬಂದು ಮರವೇರಿದ ತ್ರಿವಿಕ್ರಮನನ್ನು ನೋಡಿ, "ನನ್ನಂಥ ಬೇತಾಳನ ಬೆಂಬಿಡದ ಇವನು 'ಪೆಡಂ ಬೇತಾಳನಾಗಿರುವನಲ್ಲಾ!" ಎಂದು ಬೇತಾಳವು ಆಶ್ಚರ್ಯಪಡುತ್ತಿರಲು, ರಾಜಾ ತ್ರಿವಿಕ್ರಮನು ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹೊತ್ತುಕೊಂಡು, ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ರಾಜಾ, ಇಂತಹ ಭಯಾವಹವಾದ ರಾತ್ರಿಯಲ್ಲಿ, ನರರನ್ನು ನಡುಗಿಸುವ ಸ್ಮಶಾನ ಭೂಮಿಯಲ್ಲಿ ಇಷ್ಟೆಲ್ಲಾ ಕಷ್ಟಪಟ್ಟುಕೊಂಡು ನೀನು ಸಾಧಿಸುವ ಮಹಾ ಕಾರ್ಯವೇನೋ ನನಗೆ ಅರ್ಥವಾಗುವುದಿಲ್ಲ. ಸಾಮಾನ್ಯ ಶಕ್ತಿಯಷ್ಟೇ ಇರುವ ಅನೇಕರು ತಾವು ಮಹಾ ವೀರಸಾಹಸಿಗಳೆಂಬ ಭ್ರಮೆಗೆ ಬಿದ್ದು, ತಲೆ ಮೀರಿದ ಕಾರ್ಯಗಳನ್ನು ಸಾಧಿಸಲು ಹೋಗಿ ವಿಫಲರಾಗುತ್ತಾರೆ. ನೀನು ಕೂಡಾ ಅಂತಹವರ ಹಾಗಿನವನೇನೋ ಎಂದು ನನಗೆ ಅನುಮಾನವಾಗಿದೆ. ಇದಕ್ಕೆ ಉದಾಹರಣೆಯಾಗಿ ನಿನಗೆ ಶೂರಸೇನ ಮತ್ತು ಸುವೀರರೆಂಬವರ ಕಥೆಯೊಂದನ್ನು ಹೇಳು

*ಬೇತಾಳಕಥೆಗಳು!..*



ತ್ತೇನೆ, ಕಥೆ ಕೇಳುತ್ತಾ ನಡೆಯುವಾಗ ನಿನ್ನ ದಾರಿಯ ಶ್ರಮಕ್ಕೆ ಸ್ವಲ್ಪ ಉಪಶಮನವಾದೀತು, ಕೇಳು" ಎಂದು ಕಥೆಯನ್ನು ಪ್ರಾರಂಭಿಸಿತು :

ಭದ್ರಗಿರಿ ರಾಜ್ಯದ ಯುವರಾಜನಾದ ಶೂರಸೇನನು ಹದಿನಾರು ವರ್ಷ ಪ್ರಾಯವಾಗುವಷ್ಟರಲ್ಲಿಯೇ ಎಲ್ಲಾ ಬಗೆಯ ಯುದ್ಧ ವಿದ್ಯೆಗಳಲ್ಲಿಯೂ ತೇರ್ಗಡೆ ಹೊಂದಿಬಿಟ್ಟಿದ್ದನು. ಆದರೂ ಬಿಡದೆ ಯಾವಾಗಲೂ ಸಾಧನೆಗಳನ್ನು ಮಾಡುತ್ತಲೇ ಇದ್ದನು. ಪ್ರಪಂಚದಲ್ಲಿ ತನ್ನನ್ನು ಮೀರಿಸುವಂತಹ ವೀರನು ಬೇರೆ ಯಾರೂ ಇರಕೂಡದೆಂಬುದು ಅವನದೊಂದು ಮಹತ್ವಾಕಾಂಕ್ಷೆ.

ಒಂದು ದಿನ ದೇಶ ಸಂಚಾರ ಮಾಡಿಕೊಂಡಿದ್ದ ಅಥರ್ವಣ ಸ್ವಾಮಿ ಎಂಬವರು ಭದ್ರಗಿರಿಯ ರಾಜನ ದರ್ಶನಕ್ಕೆ ಬಂದರು. ರಾಜನು ಅವರನ್ನು ಗೌರವದಿಂದ ಸ್ವಾಗತಿಸಿ ಸಕಲ ಮರ್ಯಾದೆಗಳನ್ನೂ ಮಾಡಿದನು.

ಯುವರಾಜ ಶೂರಸೇನನು ಅಥರ್ವಣ ಸ್ವಾಮಿಯನ್ನು ಒಬ್ಬಂಟಿಗನಾಗಿ ದರ್ಶನಮಾಡಿ, ತನ್ನ ವಿದ್ಯೆಗಳನ್ನು ಅವರ ಮುಂದೆ ಪ್ರದರ್ಶಿಸಿ, "ಸ್ವಾಮಿ, ನೋಡಿದಿರಷ್ಟೇ ನನ್ನ ಸಾಮರ್ಥ್ಯ? ನೀವು ಪ್ರಪಂಚ ಪರ್ಯಟನೆ ಮಾಡಿದವರು. ಪ್ರಪಂಚದಲ್ಲಿ ನನಗಿಂತ ಹೆಚ್ಚಿನ ವೀರನನ್ನು ಎಲ್ಲಿಯಾದರೂ ನೋಡಿದ್ದೀರಾ?" ಎಂದು ಕೇಳಿದನು.

ಶೂರಸೇನನು ಅವರೊಂದಿಗೆ ಹಾಗೇಕೆ ಕೇಳಿದನೆಂದರೆ, ಅಥರ್ವಣ ಸ್ವಾಮಿಗೆ ಗೊತ್ತಿಲ್ಲದ ವಿದ್ಯೆಗಳೇ ಇಲ್ಲವೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಆದರೆ ಅವರು ಶಾಂತಿ ಪ್ರಿಯರಾದುದರಿಂದ ತಾವು ಶಿಷ್ಯರನ್ನು ಸ್ವೀಕರಿಸುವವರಲ್ಲ. ಆದರೆ ಹಿಂಸೆಯಿಲ್ಲದೆ ಯಾರಾದರೂ ಯುದ್ಧ ವಿದ್ಯೆಗಳನ್ನು ಪ್ರದರ್ಶನ ಮಾಡಿದರೆ ನೋಡಿ ಆನಂದಿಸುತ್ತಾರೆ. ಹೆಚ್ಚು ಕಡಿಮೆಗಳನ್ನು ವಿವರಿಸುತ್ತಾರೆ. ಒಂದೊಂದು ಸಾರಿ ಮೆಚ್ಚಿದವನಿಗೆ ಕೆಲವು ಸೂಕ್ಷ್ಮ ಸೂತ್ರವನ್ನೂ ಉಪದೇಶ ಮಾಡುವರು.

ಶೂರಸೇನನ ಪ್ರಶ್ನೆ ಕೇಳಿ ಅವರು ನಸುನಗುತ್ತ, "ನಿರಂತರ ಸಾಧನೆಯಿಂದ ನೀನು ಅಭ್ಯಾಸ ಮಾಡಿದ ವಿದ್ಯೆಗಳನ್ನೆಲ್ಲ ಮೆಚ್ಚಿಕೊಳ್ಳಬೇಕಾದುದೇ. ಆದರೆ ಯಾವ ಗುರುವಿನ ಸಹಾಯವೂ ಇಲ್ಲದೆ ಸಹಜವಾಗಿಯೇ, ನೀನು ತೋರಿಸಿದ ಈ ಎಲ್ಲಾ ವಿದ್ಯೆಗಳನ್ನೂ ಕಲಿತು ಪಳಗಿರುವ ಸುವೀರನೆಂಬುವನಿಗೆ ನಿನ್ನನ್ನು ಹೋಲಿಸಬಹುದೋ ಬಾರದೋ ಎಂದು ನನಗೆ ಅನುಮಾನವಾಗಿದೆ. ಅವನೂ ಈ ಎಲ್ಲಾ ವಿದ್ಯೆಗಳಲ್ಲಿಯೂ ಪಳಗಿದವನು." ಎಂದರು.

ಶೂರಸೇನನು ಕುತೂಹಲದಿಂದ ಅಥರ್ವಣ ಸ್ವಾಮಿಯನ್ನು ಕೇಳಿ, ಸುವೀರನಿರುವ ಊರು ಮುಂತಾದ ವಿವರಗಳನ್ನು ತಿಳಿದನು. ಅವನು ಅದೇ ರಾಜ್ಯದ ಒಂದು ಗ್ರಾಮದಲ್ಲಿರುವವನೆಂದು ತಿಳಿಯಿತು. ಅವನನ್ನು ನೋಡಲು ನಿರ್ಧರಿಸಿದನು.

"ಸುವೀರನು ಯಾವ ಕಾರಣವೂ ಇಲ್ಲದೆ ಯಾರೊಂದಿಗೂ ಯುದ್ಧ ಮಾಡುವವನಲ್ಲ. ಕೇವಲ ಬಲಾಬಲಗಳನ್ನು ನಿರ್ಣಯಿಸಿಕೊಳ್ಳಲಿಕ್ಕಾದರೆ ಅವನು ನಿನ್ನೊಂದಿಗೆ ಯುದ್ಧ ಮಾಡಲು ಒಪ್ಪಿಕೊಳ್ಳುವನೆಂದು ಖಂಡಿತ ಹೇಳಲಾರೆ. ಒಪ್ಪಿಕೊಳ್ಳದಿರಲೂಬಹುದು" ಎಂದು ಅಥರ್ವಣ ಸ್ವಾಮಿ ಶೂರಸೇನನಿಗೆ ಎಚ್ಚರಿಕೆ ನೀಡಿದರು.

ಅಥರ್ವಣಸ್ವಾಮಿಗಳು ಹೊರಟುಹೋದ ಮೇಲೆ ತಂದೆಯ ಅಪ್ಪಣೆ ಪಡೆದು ಶೂರಸೇನನು ಸುವೀರನಿರುವ ಗ್ರಾಮಕ್ಕೆ ಹೊರಟನು. ಆಗ ಅವನು ಯುವರಾಜನ ವೇಷದಲ್ಲಿರಲಿಲ್ಲ. ಸಾಮಾನ್ಯ ಮನುಷ್ಯನಂತೆ ಬಟ್ಟೆಬರೆ ಹಾಕಿಕೊಂಡಿದ್ದನು.



ಆ ಗ್ರಾಮದಲ್ಲಿ ಸುವೀರನದು ಸಾಧಾರಣವಾದೊಂದು ಹೆಂಚಿನ ಮನೆಯಾಗಿತ್ತು. ಅವನ ಜೀವನ ಸ್ಥಿತಿಯೂ ಸಾಮಾನ್ಯವಾದುದೇ. ತಂದೆ ತಾಯಿಯರು ಅವನಿಗಿರಲಿಲ್ಲ. ಅವನು ದಿನಾ ಕಾಡಿಗೆ ಹೋಗಿ ಕಟ್ಟಿಗೆ ಒಡೆದು ತಂದುಕೊಂಡು ಊರವರಿಗೆ ಮಾರುತ್ತಾನೆ. ಅವನನ್ನು ನೋಡಿದರೆ ಮಹಾವೀರನೆಂದು ಯಾರಿಗೂ ತೋರಲಾರದು.

ಆದರೆ ಸುವೀರನ ಪರಾಕ್ರಮವನ್ನು ಕುರಿತು ಆ ಗ್ರಾಮದಲ್ಲಿ ಕೆಲವು ಘಟನೆಗಳನ್ನು ಕಥೆಗಳ ಹಾಗೆ ಹೇಳುತ್ತಾರೆ. ಒಂದು ದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಹತ್ತು ಮಂದಿ ಡಕಾಯಿತರು ಗ್ರಾಮವನ್ನು ದೋಚಲು ಬಂದಾಗ, ಸುವೀರನೊಬ್ಬನೇ ಅವರನ್ನೆಲ್ಲಾ ಇದಿರಿಸಿ, ಒಬ್ಬರ ಕೈಯನ್ನೊಬ್ಬರೊಂದಿಗೆ ಸೇರಿಸಿ ಎಲ್ಲರನ್ನೂ ಕಟ್ಟಿ, ಕೋತ್ವಾಲ ಕಚೇರಿಗೆ ಎಳೆದೊಯ್ದು ರಕ್ಷಕ ಭಟರಿಗೆ ಒಪ್ಪಿಸಿ ಬಂದನಂತೆ.

ಮತ್ತೊಂದು ಸಾರಿ ಅರಣ್ಯದಲ್ಲಿ ಹಠಾತ್ತಾಗಿ ಅವನ ಮೇಲೆ ಹಾರಿದ ಸಿಂಹವನ್ನು ಮುಷ್ಟಿಘಾತದಿಂದಲೇ ಕೊಂದು ಹೆಗಲ ಮೇಲೆ ಹೊತ್ತುಕೊಂಡು ಊರೊಳಗೆ ತಂದಿದ್ದಾನಂತೆ.

ಅಂತಹ ಸುವೀರನ ಬಲದೊಂದಿಗೆ ತನ್ನ ಬಲವನ್ನು ತೂಗಿ ನೋಡಲು ಶೂರಸೇನನು ಒಂದು ಉಪಾಯ ಮಾಡಿದನು. ಮಧ್ಯ ರಾತ್ರಿಯ ಹೊತ್ತಿನಲ್ಲಿ ಅವನ ಮನೆಯೊಳಗೆ ಕಳ್ಳನ ಹಾಗೆ ಪ್ರವೇಶಿಸಿದನು. ಆಮೇಲೆ ಬೇಕೆಂತಲೇ ಶಬ್ದಮಾಡಿ ತಾನು ಅವನ ಕಣ್ಣಿಗೆ ಬೀಳುವಂತೆ ಮಾಡಿಕೊಂಡನು. ಸುವೀರನು ಮನೆ ನುಗ್ಗಿದ ಕಳ್ಳನನ್ನು ನೋಡಿ ಆಶ್ಚರ್ಯಪಡುವುದರೊಳಗೆ, ಶೂರಸೇನನು ಅವನನ್ನು ಕೆರಳಿಸಲು ಅವನ ಮೇಲೆ ಹಾರಿದನು. ಆದರೆ ಸುವೀರನು ಕ್ಷಣಮಾತ್ರದಲ್ಲೇ ಶೂರಸೇನನ ಆಟ ನಿಲ್ಲಿಸಿ, ಅವನ ಕೈಗಳನ್ನು ಬೆನ್ನಿಗೆ ಸೇರಿಸಿ ಕಟ್ಟಿದನು. ಇದರಿಂದ ಸುವೀರನ ಬಲವೂ, ಅದನ್ನು ಉಪಯೋಗಿಸುವ ರೀತಿಯೂ ಸಾಮಾನ್ಯವಾದುದಲ್ಲವೆಂದು ಶೂರಸೇನನಿಗೆ ಅರ್ಥವಾಯಿತು.

ಅನಂತರ ಸುವೀರನು ಶೂರಸೇನನಿಗೆ ಕಳ್ಳತನವು ಎಷ್ಟೊಂದು ನೀಚವಾದುದೆಂದು ಹೇಳುತ್ತ,

"ಇನ್ನಾದರೂ ನೀನು ಕಷ್ಟಪಟ್ಟು ಕೆಲಸ ಮಾಡಿ ನ್ಯಾಯರೀತಿಯಲ್ಲಿ ಬದುಕುವಿ ಎಂಬ ನಂಬುಗೆಯಲ್ಲಿ ಈಸಾರಿ ನಿನ್ನನ್ನು ಬಿಡುತ್ತೇನೆ" ಎಂದನು.

ಅದಕ್ಕೆ ಶೂರಸೇನನು "ಅಸಲು ನಾನು ಕಳ್ಳತನ ಮಾಡಲು ಬಂದಿದ್ದರೆ ತಾನೇ ನಿನ್ನ ಈ ಮಾತು? ನನಗೆ ನನ್ನನ್ನು ಮೀರಿಸುವ ಬಲಶಾಲಿಯೇ ಇಲ್ಲ ವೆಂಬ ನಂಬುಗೆ. ನಿನ್ನ ಬಲವನ್ನು ಕೇಳಿ, ನೋಡಿ ಬಿಡೋಣವೆಂದು ಕಳ್ಳತನದಿಂದ ಹೊಕ್ಕೆನು. ನನ್ನ ಲೆಕ್ಕ ತಪ್ಪೆಂದು ಈಗ ಗೊತ್ತಾಯಿತು" ಎಂದನು.

ಆ ಮಾತಿಗೆ ಸುವೀರನು ನಕ್ಕು, "ನೀನು ನನ ಗಿಂತಲೂ ಹೆಚ್ಚಿನ ಬಲಶಾಲಿಯಾಗಿಯೇ ಇರಬಹುದು. ನೀನು ಕಳ್ಳನ ಹಾಗೆ ನನ್ನ ಮನೆ ಹೊಕ್ಕಿರುವೆ. ಆ ತಪ್ಪು ನಿನ್ನ ಅರ್ಥಬಲವನ್ನು ನುಂಗಿತು. ಆದ್ದ ರಿಂದಲೇ ನಿನ್ನನ್ನು ಇಷ್ಟು ಸುಲಭದಲ್ಲಿ ನಾನು ಹಿಡಿದು ಕಟ್ಟಲು ಸಾಧ್ಯವಾಯಿತು" ಎಂದನು.

ಸುವೀರನ ಮಾತಿನಲ್ಲಿ ನಿಜವಿರುವಂತೆ ಶೂರಸೇನ ನಿಗೆ ತೋರಿತು. ಆದರೆ ಅವನೊಂದಿಗೆ ನಿಜವಾದ ದ್ವಂದ್ವಯುದ್ಧ ಮಾಡುವ ಬಗೆ ಹೇಗೆ? ಶೂರ ಸೇನನು ಸ್ವಲ್ಪ ಹೊತ್ತು ಆಲೋಚಿಸಿ, "ನಾನು ಕಷ್ಟಪಟ್ಟು ಕೆಲಸ ಮಾಡಲು ಸಿದ್ಧನಾಗಿದ್ದೇನೆ. ನೀನೇ ನನಗೊಂದು ಕೆಲಸ ಹೇಳಿಬಿಡು" ಎಂದನು.

ಹಾಗಾದರೆ ಮರುದಿನ ತನ್ನೊಂದಿಗೆ ಅರಣ್ಯಕ್ಕೆ ಬರುವಂತೆ ಸುವೀರನು ಹೇಳಿದನು. ಅದರಂತೆ ಮರುದಿನ ಅವರಿಬ್ಬರೂ ಅರಣ್ಯಕ್ಕೆ ಹೋದರು. ಇಬ್ಬರ ಕೈಯಲ್ಲಿಯೂ ಕೊಡಲಿ ಇದ್ದಿತು. ಸುವೀರನು ಅಲ್ಲಿರುವ ಮರಗಳನ್ನು ನಿರಾಯಾಸವಾಗಿ ಕಡಿಕಡಿದು ಉರುಳಿಸಿದನು, ಶೂರಸೇನನಿಗೆ ಒಂದು ಮರವನ್ನು ಕಡಿದು ಉರುಳಿಸಬೇಕಾದರೆ ಸಾಕೋ ಸಾಕಾಗಿ ಹೋಯಿತು. ಕಡೆಗೆ ಬೆವರು ಸುರಿಸುತ್ತ ಚಕ್ಕನೆ ಕುಳಿತು ಬಿಟ್ಟನು.

ತನ್ನನ್ನು ಆಶ್ಚರ್ಯದಿಂದ ನೋಡುತ್ತಿರುವ ಸುವೀರನನ್ನು ನೋಡಿ ಶೂರಸೇನನು, "ಬಲದಲ್ಲಿ ನಿನ್ನೊಂದಿಗೆ ನಾನು ಸರಿದೂಗಲಾರೆನು. ನನ್ನಿಂದ ಯಾವ ಕೆಲಸವೂ ಆಗಲಾರದು" ಎಂದನು.



ಸುವೀರನು ಅವನಿಗೆ ಸಮಾಧಾನ ಹೇಳುವಂತೆ, "ಈ ಕೆಲಸದಿಂದ ನಮ್ಮ ಬಲದ ಪರೀಕ್ಷೆ ಆಗಲಾರದು. ಇಂತಹ ವಿದ್ಯೆಗಳು ಅಭ್ಯಾಸದಿಂದ ಬರುವಂಥವು. ಮೊದಮೊದಲು ನಾನು ಕೂಡಾ ನಿನ್ನ ಹಾಗೆಯೇ ನಿಮಿಷದಲ್ಲಿ ಆಯಾಸಗೊಂಡು ಬೀಳುತ್ತಿದ್ದೆ. ಕೆಲವು ದಿನಗಳಲ್ಲಿ ನೀನು ಕೂಡಾ ನನ್ನ ಹಾಗೆಯೇ ಗಟ್ಟಿಗನಾಗುವೆ, ಹೆದರಬೇಡ" ಎಂದನು.

ಆ ಮಾತು ಕೂಡಾ ನಿಜವೆಂದೇ ಶೂರಸೇನನಿಗೆ ತೋರಿತು. ಅವನು ಸುವೀರನನ್ನು ಆವೇಶಗೊಳಿಸಬೇಕೆಂದುಕೊಂಡು, "ನೀನು ಯುದ್ಧ ಮಾಡುವುದರಲ್ಲಿ ಬಹಳ ಗಟ್ಟಿಗನೆಂದು ಕೇಳಿದ್ದೇನೆ. ಎಂದಾದರೂ ಮಹಾವೀರನೊಂದಿಗೆ ಹೋರಾಟ ನಡೆಸಿರುವೆಯಾ?" ಎಂದು ಕೇಳಿದನು.

"ಆಗತ್ಯ ಬಿದ್ದ ಹೊರತು ನಾನು ಯಾರೊಂದಿಗೂ ಯುದ್ಧ ಮಾಡುವುದಿಲ್ಲ, ಅದು ನನ್ನ ಸ್ವಭಾವಕ್ಕೇ ವಿರೋಧ. ಆದರೆ ಯಾವ ಅಹಂಕಾರಿಯಾದರೂ ತನ್ನನ್ನು ಮೀರಿಸುವವರಿಲ್ಲವೆಂದು ಸೊಕ್ಕು ತೋರಿಸಿದರೆ, ಅವನಿಗೆ ಪಾಠ ಕಲಿಸಲು ಯುದ್ಧ ಮಾಡದೆ ಬೇರೆ ದಾರಿ ಇಲ್ಲ. ಅಂಥ ಸಂದರ್ಭ. ಬಂದಿಲ್ಲ" ಎಂದನು ಸುವೀರ.

"ಹಾಗಾದರೆ ನಾನು ಅಂತಹ ಒಬ್ಬ ಅಹಂಕಾರಿ ಎಂದೇ ತಿಳಿ ! ನನ್ನೊಡನೆ ಯುದ್ಧ ಮಾಡುವೆಯಾ ? ಸುಮ್ಮನೆ ನಾಮಕಾರ್ಥ ಯುದ್ಧವಲ್ಲ. ನಿನ್ನ ಪೂರ್ತಿ ಬಲವನ್ನೇ ತೋರಿಸಬೇಕು. ಅಥವಾ ನನ್ನನ್ನು ಮೀರಿಸುವ ವೀರನಿಲ್ಲ ಎಂಬುದನ್ನು ಒಪ್ಪಿಕೊಳ್ಳುವೆಯಾ ?" ಎಂದನು ಶೂರಸೇನ.

"ನಿನ್ನಂತಹ ಸಾಮಾನ್ಯನಿಗೆ ಅಂತಹ ಅಹಂಕಾರ ವಿದ್ದರೆ ಅದು ನಿನಗೊಬ್ಬನಿಗೆ ಮಾತ್ರವೇ ಕೇಡು. ಆದರೆ ದೊಡ್ಡವರ ಅಹಂಕಾರದಿಂದ ಪ್ರಪಂಚಕ್ಕೇ ಕೇಡಾಗಿ ಬಿಡುತ್ತದೆ. ಆದುದರಿಂದ ಸಾಮಾನ್ಯನಾದ ನಿನ್ನ ಅಹಂಕಾರ ನನಗೊಂದು ಲಕ್ಷ್ಯವೇ ಅಲ್ಲ, ಬಿಡು !" ಎಂದನು ಸುವೀರ.

ಆಗ ಶೂರಸೇನನು ತಾನು ಯಾರೆಂಬ ನಿಜ ಸಂಗತಿಯನ್ನು ಅವನೊಂದಿಗೆ ಹೇಳಿ, "ನೀನು





ನನ್ನೊಡನೆ ಹೊರಟು ರಾಜಧಾನಿಗೆ ಬಂದು ಬಿಡು. ಎಲ್ಲರ ಮುಂದೆ ನಮ್ಮ ವಿದ್ಯೆಯನ್ನು ಪ್ರದರ್ಶಿಸೋಣ. ಇಬ್ಬರೂ ದ್ವಂದ್ವಯುದ್ಧ ಮಾಡೋಣ. ಈ ಪ್ರಪಂಚದಲ್ಲಿ ನನಗಿಂತ ಹೆಚ್ಚಿನ ವೀರನು ಇರಬಾರದೆಂಬುದು ನನ್ನದೊಂದು ಆಸೆ" ಎಂದನು.

"ಓಹೋ ! ರಾಜಕುಮಾರರಾದ ನೀವು ನನ್ನನ್ನು ಗೆದ್ದು ಬಿಡುವೆನೆಂದು ನಂಬುವಿರಾ ?" ಎಂದು ಸುವೀರನು ಕೇಳಿದನು.

"ನನ್ನ ಶರೀರದಲ್ಲಿ ತುಂಬಾ ಶಕ್ತಿ ಇದ್ದರೂ ಕೊಡಲಿಯಿಂದ ಮರವನ್ನು ಕಡಿಯಲಾಗದೆ ಹೋದೆನು. ನಿನ್ನ ಶರೀರದಲ್ಲಿ ಶಕ್ತಿ ತುಂಬಾ ಇರಬಹುದಾದರೂ ಯುದ್ಧವಿದ್ಯೆಗಳಲ್ಲಿ ನಿನಗೆ ಅಭ್ಯಾಸವಿಲ್ಲವಷ್ಟೆ ? ಚಿಕ್ಕತನದಿಂದಲೂ ಅದೇ ಸಾಧನೆಯುಲ್ಲಿರುವ ನನ್ನನ್ನು ನೀನು ಸೋಲಿಸಲಾರೆ ಎಂದೇ ನಂಬುತ್ತೇನೆ" ಎಂದನು ಶೂರಸೇನ.

"ಹಾಗಾದರೆ ನಿಮ್ಮ ಅಭಿಪ್ರಾಯ ತಪ್ಪೆಂಬುದನ್ನು ಈಗಲೇ ರುಜುಮಾಡಿ ತೋರಿಸುತ್ತೇನೆ. ಕೋಗಿಲೆಯ ಗೀತಕ್ಕೂ, ಸಿಂಹವು ಬೇಟೆಯಾಡುವುದಕ್ಕೂ ಅಭ್ಯಾಸ ಬೇಕೆಂದುಕೊಳ್ಳುವುದು ತಪ್ಪೆಂದು ನಿಮಗೇ ಗೊತ್ತಾಗುತ್ತದೆ" ಎಂದನು ಸುವೀರ.

ಇಬ್ಬರೂ ಅರಣ್ಯ ವೃಕ್ಷಗಳ ಕೆಳಗೆ ಮಲ್ಲಯುದ್ಧ ಮಾಡಿದರು. ಸುವೀರನು ಶೂರಸೇನನನ್ನು ಕ್ಷಣ ಮಾತ್ರದಲ್ಲಿ ಸೋಲಿಸಿಬಿಟ್ಟನು. ಆಮೇಲೆ ಇಬ್ಬರೂ ಸುವೀರನ ಮನೆಗೆ ಹೋಗಿ, ಅಲ್ಲಿ ಕತ್ತಿಯುದ್ಧ ಮಾಡಿದರು. ಅದರಲ್ಲಿಯೂ ಸುವೀರನದೇ ಗೆಲುವಾಯಿತು.

ಆದರೂ ಶೂರಸಿಂಹನು ಮೊಂಡು ಹಟದಿಂದ, "ನೀನು ರಾಜಧಾನಿಗೆ ಬಂದು ನನ್ನನ್ನು ಸೋಲಿಸಿದ ಹೊರತು, ನಾನು ಈ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ವೀರನೆಂದೇ ತಿಳಿಯುತ್ತೇನೆ. ಪುರಜನರ ಇದಿರಿನಲ್ಲಿ ನಾನು ನಿನ್ನನ್ನು ಸೋಲಿಸದೆ ಬಿಡುವುದಿಲ್ಲ" ಎಂದನು ಶೂರಸೇನ.

ಸುವೀರನು ಶೂರಸೇನನೊಂದಿಗೆ ಕೂಡಿ ರಾಜ ರಾಜಧಾನಿಗೆ ಹೊರಟನು. ಅಲ್ಲಿ ಅವನು ಮಹಾ ವೀರರೆಂದು ಪ್ರಸಿದ್ಧರಾದ ವೀರರನ್ನು ಎಲ್ಲಾ ಬಗೆಯ ಯುದ್ಧಗಳಲ್ಲಿಯೂ ಸೋಲಿಸಿದನು. ಹಾಗೆ ಕೆಲವರನ್ನು ಸೋಲಿಸಲು ಅವನು ಬಹಳ ಕಷ್ಟಪಡ ಬೇಕಾಯಿತು.

ಕಟ್ಟ ಕಡೆಗೆ ಸುವೀರನಿಗೂ ಶೂರಸೇನನಿಗೂ ದ್ವಂದ್ವಯುದ್ಧದ ಏರ್ಪಾಡು ನಡೆಯಿತು. ಮಲ್ಲಯುದ್ಧ, ಖಡ್ಗಯುದ್ಧ, ಕುದುರೇ ಸವಾರಿ ಮೊದಲಾದ ಅನೇಕ ವಿದ್ಯೆಗಳಲ್ಲಿ ಅವರಿಬ್ಬರೂ ಸ್ಪರ್ಧಿಸಿದರು. ವಿಚಿತ್ರವೇನೆಂದರೆ, ಎಲ್ಲದರಲ್ಲಿಯೂ ಶೂರಸೇನನದೇ ಮೇಲುಗೈಯಾಗಿ ಗೆಲುವೆಗೆ ಮುಟ್ಟಿತು !

ಸುವೀರನು ತನ್ನ ಸೋಲನ್ನು ಒಪ್ಪಿಕೊಂಡು ಅಲ್ಲಿಂದ ಹೊರಡಲು ತಯಾರಾದಾಗ, ಶೂರಸೇನನು

ಅವನನ್ನು ಮನದುಂಬಿದ ಸ್ನೇಹದಿಂದ ಆಲಿಂಗಿಸಿ ಕೊಂಡು, "ಮಿತ್ರೋತ್ತಮಾ, ನಿನ್ನನ್ನು ನಾನಿಲ್ಲಿ ಗೆದ್ದೆನಾದರೂ ಪ್ರಪಂಚದಲ್ಲಿ ನನ್ನನ್ನು ಮೀರಿಸುವ ವೀರನು ಯಾರೂ ಇಲ್ಲವೆಂಬ ಅಹಂಕಾರ ನಾಶವಾಯಿತು. ನಿನ್ನನ್ನು ಗೆಲ್ಲಲು ಕಾರಣ ವೇನೆಂಬುದೂ ನನಗೆ ಈಗ ಸ್ಪಷ್ಟವಾಗಿ ಗೊತ್ತಾ ಯಿತು !" ಎಂದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಇದಕ್ಕೆ ಮೊದಲು ಎಲ್ಲಾ ಬಗೆಯ ಯುದ್ಧ ವಿದ್ಯೆ ಗಳಲ್ಲಿಯೂ ಶೂರಸೇನನನ್ನು ಸೋಲಿಸಿದ ಸುವೀರನು, ರಾಜಧಾನಿಯಲ್ಲಿ ಅವನೊಂದಿಗೆ ಯುದ್ಧಮಾಡಿ ಹೇಗೆ ಸೋತನು? ತಾನು ಗೆಲ್ಲಲಿಕ್ಕಾಗಿ ಶೂರ ಸೇನನು ಏನಾದರೂ ಮೋಸಮಾಡಿದ್ದಾನೆಯೆ ? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಹೋಳಾಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಇದರಲ್ಲಿ ಶೂರಸೇನನು ಮಾಡಿದ ಮೋಸವೇನೂ ಇಲ್ಲ. ಸುವೀರನಿಗೆ ಅಷ್ಟೊಂದು ದೊಡ್ಡ ಶಕ್ತಿಯುಂಟಾಗಲು ಮೂಲಕಾರಣವೇನೆಂದು ತಿಳಿದುಕೊಂಡ ಮೇಲೆಯೇ ಅವನನ್ನು ಸೋಲಿಸಲು ಶೂರಸೇನನಿಗೆ ಸಾಧ್ಯ ವಾಗಿದೆ. ಎಲ್ಲಾ ಬಗೆಯ ಯುದ್ಧವಿದ್ಯೆಗಳೂ ಸುವೀರನಿಗೆ ಸಹಜವಾಗಿಯೇ ಮೈಗೂಡಿಹೋದ ಕಾರಣದಿಂದ ಅಂತಹ ವಿದ್ಯೆಗಳು ಸಹಜವಾದ ವಾತಾವರಣದಲ್ಲಷ್ಟೇ ಜಯಗಳಿಸುತ್ತವೆ. ಯಾವ ವಿದ್ಯೆಗಳ ವಿಷಯಕ್ಕೂ ಸ್ಥಾನಬಲವು ಅಗತ್ಯ. ಅಂತಹ ಸ್ಥಾನಬಲವಿಲ್ಲದಿದ್ದರೆ ಸಹಜ ಬಲದ ಧೈರ್ಯವು ಸ್ವಲ್ಪ ತಗ್ಗುತ್ತದೆ. ನೀರಿನಲ್ಲಿರುವಾಗ ಆನೆಯನ್ನು ಸಹ ಎಳೆದುಕೊಳ್ಳಬಲ್ಲ ಮೊಸಳೆ, ನೀರಿ ನಿಂದ ಮೇಲೆ ಬಂದರೆ, ನಾಯಿಗಳಿಗೂ ದೂರವಿರ ಬೇಕೆಂದು ಬಯಸುತ್ತದೆ. ಅರಣ್ಯದೊಳಗಿನ ಸಿಂಹವು ಯಾವ ಕಾರಣದಿಂದಾದರೂ ನಾಡಿನೊಳಗೆ ಬಂದು ಬಿಟ್ಟರೆ. ಆತ್ಮರಕ್ಷಣೆಯನ್ನು ನೋಡಿಕೊಳ್ಳುತ್ತದೆಯೇ ಹೊರತು, ಬೇಟೆಯಾಡಲು ಪ್ರಯತ್ನಮಾಡದು. ರಾಜಧಾನಿಯಲ್ಲಿ ಸುವೀರನಿಗೆ ಸ್ಥಾನಬಲವಿರಲಿಲ್ಲ. ದೊಡ್ಡ ದೊಡ್ಡ ವೀರರನ್ನು ಸೋಲಿಸಲು ಬಹಳ ಕಷ್ಟಪಟ್ಟು, ಅವರೆಲ್ಲರಿಗಿಂತ ಹೆಚ್ಚಿನ ವೀರನಾದ ಶೂರಸೇನನ ಕೈಯಲ್ಲಿ ಸೋತನು. ತನ್ನ ಸ್ಥಾನ ಬಲವೇ ತನ್ನನ್ನು ಗೆಲ್ಲಿಸಿತೆಂದು ಶೂರಸೇನನಿಗೆ ಗೊತ್ತಾಗಿತ್ತು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಅವನ ಹೆಗಲಿನಿಂದ ಹಾರಿ ಹೋಗಿ, ಮರದ ಕೊಂಬೆಯಲ್ಲಿ ನೇತು ಹಾಕಿ ಕೊಂಡಿತು.



# ಜೂಜುಗಾರನ ಲಾಭ

ಆ ಊರಿನಲ್ಲಿ ಆನಂದನು ಬಹು ದೊಡ್ಡ ಜೂಜುಗಾರನಾಗಿದ್ದ. ದಿನಾ ಮಧ್ಯರಾತ್ರಿಯ ಮೇಲೆಯಷ್ಟೇ ಮನೆಗೆ ಬರುವನು. ಅದರಂತೆ ಒಂದು ದಿನ ನಡುರಾತ್ರಿಗೆ ಅವನು ಬಂದು ಬಾಗಿಲು ತಟ್ಟಿದನು.

ಹೆಂಡತಿ ಗುಣು ಗುಣು ಬಯ್ಯುತ್ತಾ, ಬಂದು ಬಾಗಿಲು ತೆರೆದಳು. ಆನಂದನು ನಸುನಗು ಅರಳಿಸುತ್ತಾ ಮನೆಯೊಳಗೆ ಹೊಕ್ಕನು. ದಿನಾ ಜೂಜಿನ ಕಟ್ಟೆಯಲ್ಲಿ ಅಷ್ಟೋ ಇಷ್ಟೋ ಹಣವನ್ನು ಕಳೆದುಕೊಂಡು ಬಾಡಿದ ಮುಖದಿಂದ ಬರುವ ಗಂಡ ಹೀಗೆ ಸಂತೋಷದಲ್ಲಿರುವುದನ್ನು ನೋಡಿ, ಅವನು ಏನೋ ಗೆದ್ದುಕೊಂಡು ಬಂದಿರುವಂತೆ ಹೆಂಡತಿಗೆ ತೋರಿತು.

"ಇವತ್ತೇನೋ ನಾಲ್ಕೈದು ಕಾಸು ಗೆದ್ದು ಬಂದಿರೆಂದು ಕಾಣುತ್ತೆ" ಎಂದಳು ಹೆಂಡತಿ.

"ಏನಂದಿ? ನಾಲ್ಕು ಸಾವಿರ ರೂಪಾಯಿಗಳು ನಿನಗೆ ನಾಲ್ಕು ಕಾಸುಗಳ ಹಾಗೆ ಕಾಣುತ್ತದೇನು?" ಎಂದನು ಆನಂದ ಹುಬ್ಬುಸುರುಗಿಸಿ.

ಹೆಂಡತಿಯ ಸಂತೋಷಕ್ಕೆ ಪಾರವಿಲ್ಲದೆ ಹೋಯಿತು. ಆನಂದನು ಉತ್ಸಾಹದಿಂದ. "ಆ ಹಣ ನನ್ನ ಹತ್ತಿರ ಈಗ ಇಲ್ಲಾ ಅಂದುಕೋ. ಆದರೆ ಅಷ್ಟೊಂದು ಮೊತ್ತ ನಾನು ಗೆಲ್ಲಲಿಲ್ಲವೆಂದು ಯಾರೂ ಹೇಳಲಾರರು. ಏನು ನಡೆಯಿತೆಂದರೆ, ಜೂಜಿನಲ್ಲಿ ನಾನು ಇಬ್ಬರಿಗೆ ಐದು ಸಾವಿರ ಕೊಡಬೇಕಾಯಿತು. ಅದಕ್ಕೆ ನನ್ನ ಹತ್ತಿರ ಹಣವಿಲ್ಲ. ಐದು ಸಾವಿರಕ್ಕೆ ಬದಲಾಗಿ ಗೆದ್ದವರು ನನ್ನ ವಜ್ರದ ಉಂಗುರ ತೆಗೆದುಕೊಂಡರು. ಆ ಉಂಗುರವನ್ನು ಎಷ್ಟು ರೂಪಾಯಿಗೆ ನಾನು ಕೊಂಡುಕೊಂಡದ್ದು ಅಂತ ನಿನಗೆ ಗೊತ್ತಿದೆಯಷ್ಟೆ? ಇಡೀ ಒಂದು ಸಾವಿರ ರೂಪಾಯಿಗೆ ತಾನೇ? ಅಂದರೆ ನಾನು ಅದರಿಂದ ಈಗ ನಾಲ್ಕು ಸಾವಿರ ರೂಪಾಯಿ ಸಂಪಾದಿಸಿ ಬಿಟ್ಟೆನೆಂದಾಗಿದೆ, ಗೊತ್ತಾ?" ಎಂದನು.






# ಅಧಿಕಾರದ ದುರ್ವಿನಿಯೋಗ

ಅನೇಕ ವರ್ಷಗಳ ಹಿಂದೆ ಸಮರಪುರಕ್ಕೆ ದಕ್ಷಿಣದಲ್ಲಿ ದಟ್ಟವಾದ ಅರಣ್ಯವಿದ್ದಿತು. ಆ ಪ್ರಾಂತದಲ್ಲಿ ವಾಸಮಾಡುವ ಪ್ರಜೆಗಳು ಅರಣ್ಯದ ಪ್ರಾಣಿಗಳನ್ನೂ, ಪಕ್ಷಿಗಳನ್ನೂ ಬೇಟೆಯಾಡುವರು. ಅಷ್ಟೇ ಅಲ್ಲದೆ ಅಲ್ಲಲ್ಲಿ ತಮಗೆ ಇಷ್ಟಬಂದ ಹಾಗೆ ಮರಗಳನ್ನು ಕಡಿದು, ಹಲಗೆಗಳಿಗೂ, ನೌಕೆಗೂ ಉಪಯೋಗಿಸುವರು. ಹೀಗಾಗಿ ಅರಣ್ಯವು ಮಂದವಾಗುತ್ತಾ ಬರುತ್ತಿತ್ತು.

ಪರಿಸ್ಥಿತಿ ಹೀಗೆಯೇ ಮುಂದುವರಿಯುತ್ತಾ ಇದ್ದರೆ ಅರಣ್ಯ ಪೂರಾ ನಾಶವಾಗಿ ಹೋಗುವುದೆಂದೂ, ಹಾಗಾಗಿ ಬಿಟ್ಟರೆ ಮಳೆಬಾರದೆ ರಾಜ್ಯದಲ್ಲಿ ಕ್ಷಾಮ ಬರುವುದೆಂದೂ ರಾಜನಾದ ಚಂದ್ರುವರ್ಮನಿಗೆ ಎಚ್ಚರಿಕೆಯುಂಟಾಯಿತು.

ಕೂಡಲೇ ಅವನು ರಾಜನ ಅನುಮತಿ ಇಲ್ಲದೆ ಮರಗಳನ್ನು ಕಡಿಯಬಾರದೆಂದು ಆಜ್ಞೆ ಹೊರಡಿಸಿ, ಅರಣ್ಯವನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯನ್ನು ನಿಯಮಿಸಿದನು.

ಒಂದು ದಿನ ಆ ಅಧಿಕಾರಿ ಅರಣ್ಯದಲ್ಲಿ ತಿರುಗಿಕೊಂಡಿರುವಾಗ ಒಂದು ಕಡೆಯಲ್ಲಿ ಯುವಕನೊಬ್ಬನು ಕಟ್ಟಿಗೆಗಾಗಿ ಮರ ಕಡಿಯುವುದನ್ನು ನೋಡಿ, ತಲೆದೂಗುತ್ತಾ ಅವನ ಬಳಿಗೆ ಹೋದನು.

ಅಧಿಕಾರಿ ಅವನನ್ನು ಕೋಪದ ಕಣ್ಣುಗಳಿಂದ ನೋಡುತ್ತ, "ಈಗ ನಿನ್ನನ್ನು ಹಿಡಿದು ಮಹಾರಾಜರ ಬಳಿಗೆ ಒಪ್ಪಿಸಿಬಿಟ್ಟರೆ ನಿನಗೆ ನೂರು ವರಹ ಜುಲುಮಾನೆ ವಿಧಿಸುತ್ತಾರೆ. ಕಾಡಿನ ಮರಗಳನ್ನು ಕಡಿಯುವುದು ಅಕ್ರಮವೆಂಬುದು ನಿನಗೆ ಗೊತ್ತಿಲ್ಲವೇನು?" ಎಂದನು.

ಯುವಕನು ಬಹಳವಾಗಿ ಹೆದರಿ ದೀನನಾಗಿ, "ಅಯ್ಯಾ ಕ್ಷಮಿಸಿಬಿಡಿರಿ. ಕೆಲವರು ಈ ಪ್ರಾಂತದಲ್ಲಿ ಕಟ್ಟಿಗೆ ಕಡಿಯುವುದನ್ನು ನೋಡಿದೆ. ನಾನೂ ಜೀವನದ ದಾರಿಗಾಗಿ ಈ ಕೆಲಸ ಮಾಡಲು ಬಂದೆ, ಕಟ್ಟಿಗೆ ಕಡಿಯಕೂಡದೆಂಬ ಸಂಗತಿ ನನಗೆ ಗೊತ್ತಿರಲಿಲ್ಲ, ದಯಮಾಡಿ ಈಸಾರಿ ನನ್ನನ್ನು ಬಿಟ್ಟು ಬಿಡಿ ಅಯ್ಯಾ" ಎಂದನು.

ಅವನ ಮಾತು ಕೇಳಿ ಅಧಿಕಾರಿ ನಗುತ್ತ, "ಯಾರೋ ಕಡಿಯುವವರ ಹಾಗೆಯೇ ಕಡಿಯಲಿಕ್ಕೆ ಬಂದೆಯೇನು? ಕಡಿ, ಕಡಿ, ನಿನ್ನ ಹೊಟ್ಟೆಗೆ ನಾನು ಕಲ್ಲು ಹಾಕಲಾರೆ. ದಿನಾ ನೀನು ನನಗೆ




ಐದು ವರಹಾ ಕೊಟ್ಟು ಕಡಿಯಬಹುದು. ಅವರೆಲ್ಲಾ ಹಾಗೆಯೇ ಕೊಡುತ್ತಾರೆ ಗೊತ್ತಾ ?" ಎಂದನು.

ತಾನು ಕಡಿದ ಕಟ್ಟಿಗೆಗಳನ್ನು ನಗರದಲ್ಲಿ ಮಾರಿದರೆ ಯುವಕನಿಗೆ ದಿನಾ ಹತ್ತು ವರಹ ಸಿಗುತ್ತಿತ್ತು. ಅದರಿಂದ ಐದು ವರಹ ಈ ಅಧಿಕಾರಿಗೆ ಕೊಡುವುದರಿಂದ ದೊಡ್ಡ ನಷ್ಟವೇನಿಲ್ಲ, ಎಂದುಕೊಂಡು ಯುವಕನು ಅಧಿಕಾರಿಗೆ ಐದು ವರಹಗಳನ್ನು ಕೊಟ್ಟನು.

ಹೀಗೆ ಪ್ರತಿ ದಿನಾ ಯುವಕನು ಐದು ವರಹಗಳನ್ನು ಅಧಿಕಾರಿಗೆ ಕೊಟ್ಟು ಒಂದು ತಿಂಗಳವರೆಗೆ ತನ್ನ ಕಟ್ಟಿಗೆಯ ಕಾಯಕ ಸಾಧಿಸಿಕೊಂಡು ಹೋದನು. ಆಮೇಲೆ ಅಧಿಕಾರಿ ಅವನನ್ನು ದಿನಾ ಹತ್ತು ವರಹ ಕೊಟ್ಟ ಹೊರತು ಕಟ್ಟಿಗೆ ಕಡಿಯಲು ಸಾಧ್ಯವಿಲ್ಲವೆಂದು ಹೇಳಿಬಿಟ್ಟನು.

ಅಧಿಕಾರಿಗೆ ಹತ್ತು ವರಹ ಕೊಟ್ಟುಬಿಟ್ಟರೆ ತನಗೆ ಏನೂ ಉಳಿಯುವಂತಿಲ್ಲವೆಂಬ ಸ್ಥಿತಿ ಯುವಕನಿಗೆ ಬಂತು. ಈ ಕಾರಣದಿಂದ ಯುವಕನು ಅಧಿಕಾರಿಗೆ ಹಣಕೊಡಲು ನಿರಾಕರಿಸಿ, ಧೈರ್ಯವಾಗಿ ಮೊಂಡುತನದಿಂದ ಕಟ್ಟಿಗೆ ಕಡಿಯ ತೊಡಗಿದನು.

ಅದನ್ನು ನೋಡಿ ಅಧಿಕಾರಿ ಕೋಪದಿಂದ ಉರಿದು ಬೀಳುತ್ತ, "ನೀನು ರಾಜಾಜ್ಞೆಯನ್ನು ಉಲ್ಲಂಘಿಸಿ ಅರಣ್ಯದಲ್ಲಿ ಕಟ್ಟಿಗೆ ಕಡಿಯುತ್ತಿರುವಿ. ಈಗಲೇ ನನ್ನೊಂದಿಗೆ ನೀನು ಮಹಾರಾಜರ ಬಳಿಗೆ ಬಾರದೆ ಹೋದರೆ, ಭಟರನ್ನು ಕರೆದು ನಿನ್ನನ್ನು ಬಂಧಿಸಿ ಒಯ್ಯಬೇಕಾದೀತು. ಒಳ್ಳೆಯ ಮಾತಿನಲ್ಲಿ ಹೊರಡು." ಎಂದು ಗುಡುಗಿದನು.

"ಬರುತ್ತೇನೆ ನಡೀರಿ. ಒಂದು ಸಂಗತಿ ಮರೆಯಬೇಡಿರಿ. ಮಹಾರಾಜರೊಂದಿಗೆ ನಡೆದ ಸಂಗತಿ ಹೇಳುತ್ತೇನೆ. ಅದರಿಂದ ನಿಮಗೇ ಕುತ್ತು ಬಂದರೆ ನನ್ನನ್ನು ದೂರಬೇಡಿ!" ಎಂದು ಯುವಕನು ಹೊರಟನು.

ಯುವಕನ ಎಚ್ಚರಿಕೆಯನ್ನು ಅಧಿಕಾರಿ ಲಕ್ಷಿಸಲಿಲ್ಲ. ಒಂದು ವೇಳೆ ಯುವಕನು ತಾನು ಲಂಚ ತೆಗೆದುಕೊಂಡ ಸಂಗತಿ ಹೇಳಿದರೆ, ಸಾಕ್ಷ್ಯಾಧಾರವೇನಿಲ್ಲದ ಗಾಳೀ ಮಾತುಗಳನ್ನು ರಾಜನು ನಂಬಲಾರನೆಂದು ಅವನಿಗೆ ಗೊತ್ತಿತ್ತು. ಆ ಧೈರ್ಯದಿಂದ ಅಧಿಕಾರಿ ಯುವಕನನ್ನು ರಾಜನ ಬಳಿಗೆ ಕರೆದುಕೊಂಡು ಹೋದನು.

ಚಂದ್ರವರ್ಮ ರಾಜನು ಆ ಯುವಕನನ್ನು ನೋಡಿ, "ನೀನು ಕಾಡಿನಲ್ಲಿ ನನ್ನ ಆಜ್ಞೆಯನ್ನು ಉಲ್ಲಂಘಿಸಿ ಕಟ್ಟಿಗೆ ಕಡಿಯುತ್ತಿದ್ದುದು ದೊಡ್ಡ ತಪ್ಪು, ಇದಕ್ಕೆ ಏನು ಹೇಳುತ್ತೀ?" ಎಂದು ಕೇಳಿದನು.

ಯುವಕನು ಅಧಿಕಾರಿಯ ಕಡೆಗೆ ನೋಡಿ, "ಅಯ್ಯಾ, ನಾನು ಅರಣ್ಯದಲ್ಲಿ ಕಟ್ಟಿಗೆ ಕಡಿಯುವುದನ್ನು ನೋಡಿ ನೀವು ಅನುಮತಿ ಕೊಟ್ಟುದರಿಂದ ತಾನೇ ನಾನು ಕಡಿಯುತ್ತಾ ಇದ್ದೆ?" ಎಂದನು.

ಕೂಡಲೇ ಅಧಿಕಾರಿ ರಾಜನೊಂದಿಗೆ, "ಇವನು ಮಹಾ ಸೊಕ್ಕಿನವನು ಪ್ರಭೂ! ಒಂದು ತಿಂಗಳಿ

ನಿಂದಲೂ ಇವನು ಅಕ್ರಮವಾಗಿ ಕಟ್ಟಿಗೆ ಕಡಿಯುತ್ತ ನನ್ನನ್ನು ನೋಡಿದ ಕೂಡಲೇ ತಪ್ಪಿಸಿಕೊಳ್ಳುತ್ತಿದ್ದ. ಈಸಾರಿ ಸಿಕ್ಕಿಬಿದ್ದ" ಎಂದನು.

ಕೂಡಲೆ ಯುವಕನು ರಾಜನನ್ನು ನೋಡಿ, "ಹೌದು ಮಹಾ ಪ್ರಭೂ. ಒಂದು ತಿಂಗಳಿಂದಲೂ ದಿನಾ ಇವರು ನನ್ನನ್ನು ನೋಡಿದ್ದಾರೆ. ನಾನು ಓಡಿದ್ದು ಮಾತ್ರ ಸುಳ್ಳು. ಈಸಾರಿ ನನ್ನನ್ನು ಇಲ್ಲಿಗೆ ಕರೆಕೊಂಡು ಬರಲು ನಿಜವಾದ ಕಾರಣ ಅವರೇ ಹೇಳಿದರೆ ಒಳ್ಳೇದು. ಆ ಪ್ರಾಂತದಲ್ಲಿ ನನ್ನ ಹಾಗೆಯೇ ಇವರ ಅನುಮತಿಯಿಂದ ಮರಕಡಿಯು ವವರು ಇನ್ನೂ ಕೆಲವರಿದ್ದಾರೆ. ಅವರನ್ನೂ ಕರೆಸಿದರೆ ನಿಜಸಂಗತಿ ಗೊತ್ತಾಗುತ್ತದೆ ಪ್ರಭೂ." ಎಂದನು.

ಚಂದ್ರವರ್ಮರಾಜನಿಗೆ ಯುವಕನ ಮಾತಿನ ಅಂತರ್ಯವೇನೆಂಬುದು ಅರ್ಥವಾಯಿತು. ಅವನ ಹಾಗೆ ಕಟ್ಟಿಗೆ ಕಡಿಯುವವರನ್ನೂ ಕರೆಯಿಸಲು ಭಟರನ್ನು ಕಳುಹಿಸಿ, ಅಧಿಕಾರಿಯನ್ನು ಕೋಪದಿಂದ ನೋಡುತ್ತ, "ನೀನು ಹೇಳುವ ಹಾಗೇ ಆದರೂ ಇವನು ಒಂದು ತಿಂಗಳಿಂದ ಮರಕಡಿಯುತ್ತಾ ಇದ್ದರೆ, ಇವನನ್ನು ಹಿಡಿಯುವ ಯೋಗ್ಯತೆ ನಿನಗಿಲ್ಲ ವೆಂದಾಯಿತು. ನಿನ್ನನ್ನು ಅಧಿಕಾರಿಯಾಗಿಟ್ಟು ಏನು ಪ್ರಯೋಜನ? ಇವನ ಮಾತಿನಿಂದ ನೀನು ಇವನ ಕೈಯಿಂದ ಲಂಚ ತೆಗೆದುಕೊಂಡಿರುವೆಯೆಂದೂ ಗೊತ್ತಾಯಿತು. ಈಗ ನಿನಗೆ ಇವನನ್ನು ಹಿಡಿಯುವ ಅಗತ್ಯವೇನು ಬಂತು?" ಎಂದು ಕೇಳಿದನು.

ಅಧಿಕಾರಿಯ ಸರ್ವಾಂಗವೂ ಬೆವತು ನೀರಾಗಿ ತಲೆ ತಗ್ಗಿಸಿದನು. ಅವನಿಗೆ ಲಂಚಕೊಟ್ಟು ಕಟ್ಟಿಗೆ ಒಡೆಯುವ ಮತ್ತೆ ಮೂವರೂ ಬಂದ ಮೇಲೆ ನಿಜಸಂಗತಿ ಹೊರಬಿತ್ತು. ಅವರು ಅಧಿಕಾರಿ ಕೇಳಿದ ಹೆಚ್ಚಿನ ಹಣವನ್ನೂ ಕೊಟ್ಟರಂತೆ, ಈ ಯುವಕನೇ ಕೊಡಲಾರೆನೆಂದವನು.

ರಾಜನು ಅಧಿಕಾರಿಯನ್ನು ಕೆಲಸದಿಂದ ತೆಗೆದು ಹಾಕಿ ಯುವಕನನ್ನು ನೋಡಿ, "ಈ ಅಧಿಕಾರ ಪದವಿಯನ್ನು ನಿನಗೇ ಕೊಡುತ್ತೇನೆ. ಆದರೆ ನೀನು ಕೂಡಾ ಲಂಚ ತೆಗೆದುಕೊಳ್ಳಲಾರೆಯೆಂದು ನಂಬು ವುದು ಹೇಗೆ?" ಎಂದನು.

ಯುವಕನು ರಾಜನಿಗೆ ನಮಸ್ಕರಿಸುತ್ತ, "ಹೀಗೆ ಲಂಚಪಡೆದು ಕೊಳ್ಳುವವನ ದುಸ್ಥಿತಿಯನ್ನು ಕಣ್ಣಾರೆ ನೋಡಿದ ಮೇಲೆ, ಅಂತಹ ಹಾಳು ಕೆಲಸ ನಾನು ಹೇಗೆ ಮಾಡುವೆನು ಮಹಾಪ್ರಭೂ?" ಎಂದನು.

ರಾಜನು ಅವನ ಉತ್ತರಕ್ಕೆ ತೃಪ್ತನಾಗಿ, ಹೊಸ ಅರಣ್ಯ ರಕ್ಷಣಾಧಿಕಾರವನ್ನು ಅವನಿಗೇ ಒಪ್ಪಿಸಿದನು. ಹೆಚ್ಚು ಲಂಚಕೊಡಲು ಸಿದ್ಧರಾದವರಿಗೆ ರಾಜನು ಎಚ್ಚರಿಕೆ ಹೇಳಿ ಕಳುಹಿಸಿದನು.



# ಜ್ಞಾನಬೋಧೆ

**ಯೋ**ಗಾನಂದರೆಂಬೊಬ್ಬರು ವಿದ್ವಾಂಸರ ಗುರುಕುಲದಲ್ಲಿ ಅನೇಕ ಮಂದಿ ಶಿಷ್ಯರಿದ್ದರು.

ಅವರಲ್ಲಿ ಸಾಂಬನೆಂಬವನು ಬಹಳ ಕೋಪಿಷ್ಠನೂ ಮೂರ್ಖನೂ ಆಗಿದ್ದನು.

ತಾನು ಹೇಳಿದ್ದೇ ಸತ್ಯವೆಂದೂ, ತಾನೇ ದೊಡ್ಡ ವಿಜ್ಞಾನಿಯೆಂದೂ, ಉಳಿದವರೆಲ್ಲಾ ಮೂಢರೆಂದೂ ಅವನ ಭಾವನೆ. ಅದಕ್ಕೆ ತಕ್ಕ ಮಾತು.

ಇದರಿಂದಾಗಿ ಉಳಿದ ಶಿಷ್ಯರೊಂದಿಗೆ ಅವನು ವಾದ ವಿವಾದ ಮಾಡುತ್ತ ಬೈಯಲು ತೊಡಗಿ, ಒಂದೊಂದು ಸಾರಿ ಹೊಡೆದು ಬಿಡುವುದೂ ಉಂಟು. ಇಷ್ಟೇ ಅಲ್ಲದೆ ಈ ಸಂಗತಿಯನ್ನು ಗುರುಗಳ ಹತ್ತಿರ ಹೇಳಿದರೆ ಯಾರು ಹೇಳುವರೋ ಅವರ ಪ್ರಾಣ ಉಳಿಯದೆಂದೂ ಹೆದರಿಸುತ್ತಿದ್ದನು.

ಈ ಬಗೆಯ ಸಾಂಬನ ದೌರ್ಜನ್ಯಕ್ಕೆ ಹೆದರಿ ಉಳಿದ ಶಿಷ್ಯರು ಅವನ ಗೊಡವೆಗೆ ಹೋಗದೆ ದೂರ ದೂರ ಇರತೊಡಗಿದರು.

ಇದು ಹೇಗೋ ಯೋಗಾನಂದರ ದೃಷ್ಟಿಗೆ ಬಿತ್ತು.

ಒಂದು ದಿನ ಅವರು ಶಿಷ್ಯರಿಗೆ ಜ್ಞಾನ ಬೋಧೆ ಮಾಡುತ್ತ, "ಉತ್ತಮ ಗುಣಗಳಿಂದ ವಿಜ್ಞಾನಿಯಾಗಿರುವವನು ಪಾದರಕ್ಷೆಗಳು ಕಚ್ಚುತ್ತವೆಂದು ಅವುಗಳನ್ನು ಕಚ್ಚಲಾರನು; ಅವುಗಳನ್ನು ವಿಸರ್ಜಿಸುತ್ತಾನೆ. ಹಾಗೆಯೇ ನಾಯಿ ಬೊಗಳುವುದೆಂದು ಅದರೊಂದಿಗೆ ತಾನೂ ಬೊಗಳಲಾರನು, ಆ ನಾಯಿಗೆ ದೂರವಾಗಿರುತ್ತಾನೆ, ನೀವೆಲ್ಲಾ ಸಾಂಬನಿಗೆ ದೂರದೂರವಿರುವ ಹಾಗೆ" ಎಂದರು ಚಮತ್ಕಾರವಾಗಿ.

ಈ ಮಾತು ಸಾಂಬನಿಗೆ ಚುರ್ರೆನಿಸಿತು. ಇಷ್ಟು ದಿನ ತಾನು ಎಂತಹ ಕೆಟ್ಟದಾರಿಯಲ್ಲಿ ನಡೆದೆನೆಂಬುದು ಅರ್ಥವಾಯಿತು. ಆಮೇಲೆ ಅವನು ಸಹಾಧ್ಯಾಯಿಗಳೊಂದಿಗೆ ಸ್ನೇಹವಾಗಿ ನಡೆಯ ತೊಡಗಿದನು.





# ಮೇಕೆಯ ನಗು

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸಿ ಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಂದು ಗುಡ್ಡದ ಮೇಲೆ ದೊಡ್ಡ ದೇವದಾರು ವೃಕ್ಷವಾಗಿ ಹುಟ್ಟಿದನು. ವೃಕ್ಷವು ದೊಡ್ಡದಾಗಿ ಬೆಳೆದು ಆ ಪರಿಸರಗಳಲ್ಲಿ ವಾಸಮಾಡುವ ಜನರ ಪ್ರವರ್ತನೆಗಳನ್ನು ಸರ್ವ ಸಾಕ್ಷಿಯಂತೆ ಗಮನಿಸಿಕೊಂಡಿದ್ದಿತು.

ಆ ಗುಡ್ಡದ ಕೆಳಗಿನ ಒಂದು ಪ್ರಶಸ್ತವಾದ ಜಾಗದಲ್ಲಿ ಪಂಡಿತನೊಬ್ಬನು, ಯಾವುದೋ ಮಾಡ ಬಾರದ ಕೆಲಸ ಮಾಡಿದ ಪಾಪವನ್ನು ಪರಿಹರಿಸಿ ಕೊಳ್ಳಲಿಕ್ಕಾಗಿ, ಏನೋ ಒಂದು ವತ್ರವನ್ನು ನಡೆಸಿ ಕೊಂಡಿದ್ದನು. ಆ ವ್ರತವು ಫಲಿಸಬೇಕಾದರೆ ವಿಧಿ ಪ್ರಕಾರ ಕೊನೆಯ ದಿನ ದೊಡ್ಡ ಪೂಜೆ ಮಾಡಿ, ಒಂದು ಮೇಕೆಯನ್ನು ಬಲಿ ಕೊಟ್ಟು, ನೈವೇದ್ಯ ಮಾಡಬೇಕಾಗಿದ್ದಿತು.

ಅದಕ್ಕಾಗಿ ಆ ಪಂಡಿತನು ಒಬ್ಬ ಧನಿಕನ ಬಳಿಗೆ ಹೋಗಿ ತನಗೊಂದು ಮೇಕೆ ಬೇಕೆಂದು ಯಾಚನೆ ಮಾಡಿದನು. ಧನಿಕನು ತನ್ನ ಮಂದೆಯಲ್ಲಿರುವ ಮೇಕೆಗಳಲ್ಲಿ ಬಲಿಷ್ಠವಾದೊಂದು ಪ್ರಾಯದ ಮೇಕೆ ಯನ್ನು ಪಂಡಿತನಿಗೆ ದಾನವಾಗಿ ಕೊಟ್ಟನು. ಪಂಡಿತನು ತನ್ನ ಶಿಷ್ಯರಿಬ್ಬರನ್ನು ಕರೆದು ಅದನ್ನು ನದಿಯಲ್ಲಿ ಸ್ನಾನಮಾಡಿಸಿ, ಅದರ ಕೊರಳಿಗೆ ಹೂಗಳ ಮಾಲೆ ಹಾಕಿ ತನ್ನ ಬಳಿಗೆ ತಂದು ನಿಲ್ಲಿಸುವಂತೆ ಹೇಳಿದನು.

ಆ ಸಮಯದಲ್ಲಿ ಆಕಾಶವು ಮೇಘಗಳಿಂದ ಮುಚ್ಚಲ್ಪಟ್ಟಿದ್ದಿತು. ಶಿಷ್ಯರು ಗುರುವಿನ ಆಜ್ಞೆಯ ಪ್ರಕಾರ ಆ ಮೇಕೆಯನ್ನು ನದಿಯ ಬದಿಗೆ ಒಯ್ದರು. ಶಿಷ್ಯನೊಬ್ಬನು ಮೇಕೆಯನ್ನು ನದಿಗಿಳಿಸಿ, ಅದರ ಶರೀರವನ್ನು ಶುಭ್ರವಾಗಿ ತೊಳೆದನು. ಆ ಕೆಲಸ ಪೂರ್ತಿಯಾಗುವಷ್ಟರಲ್ಲಿ ಎರಡನೆಯ ಶಿಷ್ಯನು ಗಿಡಮರಗಳಿಂದ ಬಗೆಬಗೆಯ ಹೂಗಳನ್ನು ಹರಿದು ಒಂದು ಕದಂಬ ಪುಷ್ಪ ಮಾಲೆಯನ್ನು ತಯಾರಿಸಿದ್ದೂ ಆಯಿತು.

ಶಿಷ್ಯರಿಬ್ಬರೂ ಮೇಕೆಯ ಕೊರಳಿಗೆ ಹೂಮಾಲೆ ಹಾಕಲು ಎತ್ತಿಕೊಂಡಾಗ ಆ ಮೇಕೆ ತಲೆಯೆತ್ತಿ ಗಟ್ಟಿಯಾಗಿ ನೆಗಾಡಿತು.

ಅದನ್ನು ಕೇಳಿ ಶಿಷ್ಯರು ಮೇಕೆ ನೆಗಾಡಿದ್ದು ತಿಳಿಯದೆ, ಬೇರೆ ಯಾರೋ ನಕ್ಕರೆಂದು ಭ್ರಮಿಸಿ ಅತ್ತಿತ್ತ ನೋಡಿದರು. ಆದರೆ ಸುತ್ತಲೆಲ್ಲಿಯೂ

ಜಾತಕ ಕಥೆ



ನೆಗಾಡಿತು. ಆಮೇಲೆ ಬಳಬಳ ಕಣ್ಣೀರಿಳಿಸಿ ಅತ್ತಿತು. ಇಂಥಾದ್ದು ಬಲಿಪಶುವಾಗಿ ಉಪಯೋಗವಾದೀತೆ? ಇದು ನಿಜವಾದ ಮೇಕೆಯೋ ಮೇಕೆ ರೂಪದ ಭೂತವೋ ಅನುಮಾನವಾಗಿದೆ. ನಾವು ಇನ್ನೊಂದು ಮೇಕೆಯನ್ನು ಸಂಪಾದಿಸುವುದು ಒಳ್ಳೆಯದು" ಎಂದರು.

ಅದಕ್ಕೆ ಗುರುಗಳು ಏನೋ ಹೇಳಲಿರುವಷ್ಟರಲ್ಲಿ ಮೇಕೆ, "ಸಂಶಯಪಡಬೇಡಿ. ನಾನು ನಿಜವಾದ ಮೇಕೆಯಾಗಿಯೇ ಹುಟ್ಟಿದ್ದೇನೆ. ನನ್ನನ್ನು ಬಲಿಪಶುವಾಗಿ ನೀವು ಧಾರಾಳವಾಗಿ ಉಪಯೋಗಿಸಿಕೊಳ್ಳಿರಿ!" ಎಂದು ಹೇಳಿತು.

ಅದರ ಮಾತು ಕೇಳಿದ ಕೂಡಲೇ ಆ ಶಿಷ್ಯರು ಮಾತ್ರವಲ್ಲ, ಗುರುವೂ ಹೆದರಿ ಮೂರ್ಛೆ ಬೀಳುವಷ್ಟರಮಟ್ಟಿಗೆ ನಡುಗಿದರು. "ಹಾಗೆ ಹೆದರಬೇಡಿ. ನನ್ನಿಂದ ನಿಮ್ಮ ಜೀವಕ್ಕೆ ಏನೂ ಕೆಡುಕಾಗದು. ನಿಮ್ಮ ಕೆಲಸ ಮುಂದುವರಿಸಿರಿ!" ಎಂದಿತು ಮೇಕೆ.

ಪಂಡಿತನು ಭಯದಿಂದ ಸ್ವಲ್ಪ ಬಿಡುಗಡೆ ಹೊಂದಿ, "ಮೇಕೆ ಮನುಷ್ಯರ ಹಾಗೆ ಮಾತಾಡುವುದೆಂದರೆ ವಿನಾಶ್ಚರ್ಯವಿದು! ಇದು ಯಾವುದೋ ಅವತಾರವೇ ಆಗಿದೆ." ಎಂದನು.

"ಇದರಲ್ಲಿ ಆಶ್ಚರ್ಯಪಡುವಂಥಾದ್ದು ಏನೂ ಇಲ್ಲ. ನಾನೂ ಒಂದು ಕಾಲದಲ್ಲಿ ನಿಮ್ಮಂಥ ಮನುಷ್ಯನಾಗಿಯೇ ಇದ್ದೆ. ಸಾಧಾರಣ ಮನುಷ್ಯನಲ್ಲ, ಬ್ರಾಹ್ಮಣ, ಅದರ ಮೇಲೆ ದೊಡ್ಡ ಪಂಡಿತ!" ಎಂದಿತು ಮೇಕೆ.

"ಹಾಗೇನು? ಹಾಗಾದರೆ ಇಂತಹ ಹೀನ ಜನ್ಮ ನಿನಗೇಕೆ ಬಂತು? ಏನು ಪಾಪ ಮಾಡಿದಿ?" ಎಂದು ಕೇಳಿದನು ಪಂಡಿತ.

ಈ ಪ್ರಶ್ನೆಗೆ ಮೇಕೆ ಮುಖದಲ್ಲಿ ದೈನ್ಯ ಭಾವ ತಂದುಕೊಂಡು, "ನನ್ನ ಕರ್ಮ. ನಾನು ಬಹಳ ಪಾಪ ಕರ್ಮ ಮಾಡಿದ್ದೆ, ಅದಕ್ಕಾಗಿ ಒಂದಾನೊಂದು

ಇನ್ನೊಬ್ಬ ಮಾನವ ಪ್ರಾಣಿ ಕಾಣದ್ದರಿಂದ, ನಕ್ಕಿದ್ದು ಮೇಕೆಯೇ ಎಂದು ತಿಳಿದು ಅದನ್ನೇ ನೋಡುತ್ತ ಭಯದಿಂದ ಕಂಪಿಸ ತೊಡಗಿದರು.

ಇಬ್ಬರೂ ಒಬ್ಬರನ್ನೊಬ್ಬರು ನೋಡಿ, ಕಣ್ಸನ್ನೆ ಮಾಡಿಕೊಂಡು ಓಡಿಹೋಗಲು ಹವಣಿಸಿದರು. ಆಗ ಮೇಕೆ ನಗುವುದನ್ನು ಬಿಟ್ಟು ತಲೆ ತಗ್ಗಿಸಿ ಅವರನ್ನು ನೋಡುತ್ತ ದಳದಳನೆ ಕಣ್ಣೀರಿಳಿಸಿ ಅಳಲು ಪ್ರಾರಭಮಾಡಿತು. ಅದನ್ನು ನೋಡಿ ಶಿಷ್ಯರ ಕೈಕಾಲುಗಳಿಗೆ ಧೈರ್ಯ ಬಂದು ಸ್ವಲ್ಪ ಗಟ್ಟಿಯಾಯಿತು. ಮೆಲ್ಲಮೆಲ್ಲನೆ ಮುಂದೆ ಬಂದರು.

ಅವರು ಮೆಲ್ಲನೆ ಅದರ ಕೊರಳಿಗೆ ಹೂಮಾಲೆ ಹಾಕಿ, ತಮ್ಮ ಗುರುವಿನ ಹತ್ತಿರ ಕರೆದುಕೊಂಡು ಹೋದರು. ಅಲ್ಲಿ ಅವರು ಗುರುವನ್ನು ನೋಡಿ ರಹಸ್ಯವಾಗಿ, "ಸ್ವಾಮಿ, ಈ ಮೇಕೆಯನ್ನು ಯಾವುದೋ ಭೂತವು ಹಿಡಿದುಕೊಂಡ ಹಾಗಿದೆ. ನದಿಯ ಹತ್ತಿರ ಇದು ಮನುಷ್ಯರ ಹಾಗೆಯೇ

ವ್ರತ ಹಿಡಿದು ಆ ಪಾಪಗಳಿಂದ ಮುಕ್ತನಾಗಬಹು ದೆಂಬ ಭ್ರಮೆಯಲ್ಲಿ, ಆ ವ್ರತದ ನಿಯಮದಂತೆ ನಾನೂ ಒಂದು ಮೇಕೆಯನ್ನು ಬಲಿಗೊಟ್ಟೆನು. ಆದರೂ ವಿಧಿಯನ್ನು ವಂಚಿಸಲು ನನಗಾಗದೆ ಹೋಯಿತು. ಆಮೇಲೆ ಐನೂರು ಸಾರಿ ಮೇಕೆ ಯಾಗಿ ಹುಟ್ಟುತ್ತಾ ಬಂದಿದ್ದೇನೆ, ಇದೀಗ ನಿಮ್ಮ ಮುಂದೆ ನಿಂತಿದ್ದೇನೆ." ಎಂದಿತು.



ಪಂಡಿತನು ಅಪಾರ ಆಶ್ಚರ್ಯದಿಂದ ಕಣ್ಣು ಬಾಯಿ ತೆರೆದು, "ಐನೂರು ಸಾರಿ ಮೇಕೆಯ ಜನ್ಮವೇ!" ಎಂದನು.

"ಹೌದು. ಇದರಲ್ಲಿ ನಾನ್ನೂರ ತೊಂಬತ್ತೊಂಬತ್ತು ಸಾರಿ ಯಾರೋ ಒಬ್ಬರು ನನ್ನನ್ನು ಬಲಿಪಶುವಾಗಿ ಉಪಯೋಗಿಸಿಕೊಂಡರು. ಈ ದಿನ ಈಗ ನನ್ನ ತಲೆ ಐನೂರನೇ ಸಾರಿ ಕಡಿಯಲಿಕ್ಕಿದೆ. ಇದರಿಂದ ನನಗೆ ಪಾಪ ವಿಮೋಚನೆಯಾಗುತ್ತದೆ. ನದಿಯಲ್ಲಿ ಸ್ನಾನ ಮಾಡಿದ ಮೇಲೆ ನನಗೆ ಪೂರ್ವ ಜ್ಞಾನ ಉಂಟಾಗಿದೆ. ಈ ಮೊದಲು ಹೀಗೆ ಪೂರ್ವ ಜ್ಞಾನ ಬಂದಿರಲಿಲ್ಲ. ಇಂದಿಗೆ ಪಾಪ ವಿಮುಕ್ತಿಯಾಗುವುದೆಂಬ ಆನಂದದಲ್ಲಿ ನಗು ಬಂತು," ಎಂದಿತು ಮೇಕೆ.

"ಓಹೋ! ಹಾಗಾದರೆ ಅಳಲಿಕ್ಕೇನಾಯಿತು ?" ಎಂದು ಪಂಡಿತನು ಕೇಳಿದನು.

"ಅದುವೋ ? ನಿಜವನ್ನು ಹೇಳುತ್ತೇನೆ. ಐನೂರು ಜನ್ಮಗಳಿಗೆ ಮೊದಲು, ನಾನು ಏನು ಮಾಡಿ ಪಾಪ ಕಟ್ಟಿಕೊಂಡೆನೋ ಅಂತಹ ಪಾಪವನ್ನೇ ನೀನೂ ಕಟ್ಟಿಕೊಂಡು ಈ ಮೇಕೆ ಬಲಿಯ ವ್ರತ ಹಿಡಿದಿರುವಿ. ಆದ್ದರಿಂದ ನೀನೂ ಕೂಡಾ ನನ್ನ ಹಾಗೆಯೇ ಇನ್ನು ಮುಂದೆ ಮೇಕೆಯ ಜನ್ಮಗಳನ್ನು ಎತ್ತುತ್ತಾ ಬಲಿಯ ಬಾಧೆಯನ್ನು ಅನುಭವಿಸುವಂತಾಗುವುದಲ್ಲಾ ಎಂಬ ನೆನಪಿನಿಂದ ಕಣ್ಣೀರು ಬಂತು. ವಿಧಿಯನ್ನು ತಪ್ಪಿಸಲು ಯಾರಿಂದಾದೀತು ? ಮುಗಿಸಿಬಿಡು ನಿನ್ನ ಬಲಿ ವಿಧಿಯ ಕಾರ್ಯ" ಎಂದಿತು ಮೇಕೆ.

ಪಂಡಿತನು ಆಲೋಚನೆಗೆ ಬಿದ್ದನು. ಅವನ ಶಿಷ್ಯರು ತುಸು ದೂರದಲ್ಲಿ ನಿಂತು, ಮೇಕೆ ಹೇಳುವುದನ್ನೆಲ್ಲಾ ಕೇಳಿ ಅದ್ಭುತರಸದ ಗುಂಡಿಯಲ್ಲಿ ಮುಳುಗೇಳು ತ್ತಿದ್ದರು. ಮೇಕೆಯನ್ನು ಬಲಿಗೊಡುವುದರ ಮೂಲಕ ಮುಂದಿನ ಜನ್ಮಗಳಲ್ಲಿ ತಮ್ಮ ಗುರುವಿಗೆ ಬರಲಿರುವ ದುರ್ಗತಿಯನ್ನು ನೆನೆದಾಗ ಅವರಿಗೂ ದುಃಖವು ಉಕ್ಕುಕ್ಕಿ ಬರತೊಡಗಿತು.

ಪಂಡಿತನು ತನ್ನ ಶಿಷ್ಯರ ಕಡೆಗೆ ನೋಡಿ, ಆಮೇಲೆ ಆ ಮೇಕೆಯ ಮೇಲೆಯೇ ದೃಷ್ಟಿ ನೆಟ್ಟನು. ಏನೋ ಮಂತ್ರಗಳನ್ನು ಉಚ್ಚರಿಸಿ ಒಂದು ಮೇಕೆಯನ್ನು ಬಲಿಕೊಟ್ಟ ಮಾತ್ರಕ್ಕೆ ತಾನು ಮಾಡಿದ ಪಾಪಗಳು ಒರೆಸಿಹೋಗುವುದೆಂದು ನಂಬುವುದು ಅಜ್ಞಾನ ವೆಂದು ತೋರಿತು. ಆದರ ಮೇಲೆ ತಾನೊಂದು 'ಅಲ್ಪ ಜೀವಿಯನ್ನು ಕೈಯಾರೆ ಕೊಲ್ಲುವುದರ ಮೂಲಕ ಇನ್ನಿಷ್ಟು ಪಾಪವನ್ನೇ ಮೂಟೆ ಕಟ್ಟಿ ಕೊಳ್ಳುತ್ತೇನೆಂದೂ ತಿಳಿದನು.

" ಹೆದರಬೇಡ ಮೇಕೇ. ನಾನು ನಿನ್ನನ್ನು ಬಲಿಗೊಡಲಾರೆ." ಎಂದನು ಪಂಡಿತ.

" ನನಗೆ ಸಾಯುವುದಕ್ಕೆ ಭಯವೇನೂ ಇಲ್ಲ. ಎಷ್ಟು ಬೇಗ ಸಾವು ಬರುವುದೋ ಎಂದು ಕಾದಿದ್ದೇನೆ. ಹಿಡಿದ ಕೆಲಸ ಮಾಡಿ ಮುಗಿಸಯ್ಯ " ಎಂದಿತು ಮೇಕೆ.

" ಸಾಯಲಿಕ್ಕೆ ಹೆದರುವುದೂ ಬಿಡುವುದೂ ನಿನ್ನಿಷ್ಟ. ನಾನು ಮಾತ್ರ ನಿನ್ನನ್ನು ಕೊಲ್ಲಲಾರೆ. ನೀನು ಎಷ್ಟು ಹೇಳಿದರೂ ನಾನು ನಿನ್ನನ್ನು ಬಲಿಕೊಡುವುದಿಲ್ಲ. ಇದು ಖಂಡಿತ " ಎಂದನು ಪಂಡಿತ.

" ನನಗೆ ಈ ದಿನ ಮರಣವೆಂದು ಬರೆಯಲ್ಪಟ್ಟಿದೆ. ಅದು ನಿನ್ನ ಕೈಯಿಂದ ನಡೆಯದೆ ಹೋದರೆ ಇನ್ನೊಬ್ಬರಿಂದಾದರೂ ಆದೀತು." ಎಂದಿತು ಮೇಕೆ.

ಪಂಡಿತನು ತಲೆ ಕೊಡರಿಕೊಂಡು, " ಹಾಗೂ ನಡೆಯಕೂಡದು. ನಿನಗೆ ಯಾರಿಂದಲೂ ಹಾನಿಯಾಗದಂತೆ ನೋಡಿಕೊಳ್ಳುವ ಭಾರ ನನ್ನದು " ಎಂದನು.

ಪಂಡಿತನು ಶಿಷ್ಯರನ್ನು ನೋಡಿ, ಮೇಕೆಯನ್ನು ಮೇಯಲು ಬಿಟ್ಟು ನೋಡಿಕೊಂಡಿರುವಂತೆ ಹೇಳಿದನು. ಮೇಕೆ ಸಮೀಪದಲ್ಲಿದ್ದ ತೋಟದೊಳಗೆ ಹೊಕ್ಕು ಸ್ವಲ್ಪ ಹೊತ್ತು ತಿರುಗಾಡಿತು. ಅಲ್ಲಿಂದ ನದಿಯ ತೀರಕ್ಕೆ ಹೋಯಿತು. ಪಂಡಿತನೂ ಅವನ ಶಿಷ್ಯರೂ ಅದಕ್ಕೆ ತುಸು ದೂರದಲ್ಲಿ ಹಿಂಬಾಲಿಸಿಕೊಂಡಿದ್ದರು.

ತನಗಿಷ್ಟವಾದ ಕಡೆಗಳಲ್ಲೆಲ್ಲಾ ತಿರುಗಿ ಎರಡು ಮೂರು ಗಂಟೆಗಳನ್ನು ಕಳೆದ ಮೇಲೆ ಆ ಮೇಕೆ ಬೆಟ್ಟದ ಮೇಲೆ ಏರ ತೊಡಗಿತು. ಪಂಡಿತನೂ ಶಿಷ್ಯರೂ ಅದನ್ನು ಕೆಳಗಿನಿಂದಲೇ ನೋಡುತ್ತಿದ್ದರು.

ಆ ಸಮಯಕ್ಕೆ ಆಕಾಶದಲ್ಲಿ ಕಾರ್ಮೋಡಗಳು ಇನ್ನಿಷ್ಟು ದಟ್ಟವಾಗಿ ಗುಂಪುಗೂಡಿದವು. ಮೇಕೆ ಗುಡ್ಡದ ಬಂಡೆಗಲ್ಲುಗಳನ್ನು ಏರುತ್ತ ಇಳಿಯುತ್ತ ಗುಡ್ಡದ ಶಿಖರವನ್ನು ತಲಪಿತು. ಪಂಡಿತನೂ, ಶಿಷ್ಯರೂ ನೋಡುತ್ತಿದ್ದ ಹಾಗೆಯೇ. ಆಕಾಶದಲ್ಲಿ ಕಣ್ಣು ಕೋರೈಸುವಂತೆ ಮಿಂಚಿ, ಕಿವಿ ಕಿವುಡಾಗುವಂತೆ ಸಿಡಿಲು ಅಪ್ಪಳಿಸಿತು. ಅದರ ಹೊಡೆತಕ್ಕೆ ಮೇಕೆ ಸತ್ತು ಬೀಳುವುದನ್ನು ನೋಡಿ, ಪಂಡಿತನೂ ಶಿಷ್ಯರೂ ದೊಡ್ಡದಾಗಿ ಉಸಿರು ಬಿಟ್ಟು, ವೈರಾಗ್ಯ ಭಾವದಿಂದ ಹಿಂದಿರುಗಿದರು.

ಗುಡ್ಡದ ಮೇಲೆ ದೇವದಾರು ವೃಕ್ಷವಾಗಿದ್ದ ಬೋಧಿಸತ್ವನು ಅವರನ್ನು ನೋಡಿ ಬಹಳ ಸಂತೃಪ್ತನಾದನು. ತಾವು ಮಾಡಿದ ಪಾಪ ಕೃತ್ಯಗಳಿಂದ ವಿಮುಕ್ತಿ ಹೊಂದಲು ವ್ರತಗಳನ್ನೂ, ಯಜ್ಞಗಳನ್ನೂ, ಬಲಿಗಳನ್ನೂ ಕೊಡುವುದು ವ್ಯರ್ಥವೆಂಬ ಜ್ಞಾನ ಮನುಷ್ಯರಲ್ಲಿ ಕೆಲವರಿಗಾದರೂ ಬರುವಂತಾಯಿತೆಂಬುದನ್ನು ನೋಡಿ, ಆತನಿಗೆ ಸಂತೋಷವಾಗಿ, ವೃಕ್ಷ ರೂಪದಲ್ಲೇ ತಲೆದೂಗಿಕೊಂಡಿದ್ದನು.





# ಜಹಾಂಗೀರ್, ಷಾಜಹಾನ್

ಅಕ್ಬರನ ಆನಂತರ ಅವನ ಮಗ ಸಲೀಮನು, ಜಹಾಂಗೀರ್ ಎಂಬ ಹೆಸರಿನಿಂದ ೧೬೦೫ ನೇ ಸಂವತ್ಸರದಲ್ಲಿ ಮೊಗಲ್ ಸಿಂಹಾಸನವನ್ನು ಏರಿದನು. ಆದರ್ಶ ಪರಿಪಾಲಕನಾದ ತಂದೆಯಂತೆ ಇವನಿರಲಿಲ್ಲ. ಇವನು ನಿರ್ಮಾಣಾತ್ಮಕ ಕಾರ್ಯಗಳಿಗಿಂತಲೂ ವಿನೋದಗಳಿಗೇ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದನು.

ಸೌಂದರ್ಯದ ರಾಣಿ ಎಂದು ಹೆಸರು ಪಡೆದ ಮೆಹರುನ್ನೀಸಾ ಎಂಬ ವಿಧವೆ ಯುವತಿಯನ್ನು, ಜಹಾಂಗೀರನು ಮದುವೆ ಮಾಡಿಕೊಂಡು ಅವಳಿಗೆ ನೂರ್ಜಹಾನ್ ಎಂದು ಹೆಸರಿಟ್ಟನು. ಕ್ರಮಕ್ರಮವಾಗಿ ನೂರ್ಜಹಾನ್ ರಾಜ್ಯಪಾಲನೆಯ ವ್ಯವಹಾರಗಳಿಗೂ ತಲೆ ಹೊಗಿಸ ತೊಡಗಿದಳು. ಜಹಾಂಗೀರ್ ನಾಣ್ಯಗಳ ಮೇಲೆ ತನ್ನ ಚಿತ್ರದ ಜತೆಯಲ್ಲಿ ನೂರ್ಜಹಾನಳ ಚಿತ್ರವನ್ನೂ ಮುದ್ರಿಸತೊಡಗಿದನು.





ಜಹಾಂಗೀರನ ಹಿರಿಯ ಮಗನಾದ ಖುಸ್ರೂ ತಂದೆಯ ಮೇಲೆ ಬಂಡಾಯವೆದ್ದು ಸಿಂಹಾಸನವನ್ನು ಆಕ್ರಮಿಸಲು ನೋಡಿದನು. ಜಹಾಂಗೀರ್ ದೊಡ್ಡ ಯುದ್ಧವೀರನಲ್ಲದಿದ್ದರೂ, ಆ ಸಂಗತಿ ತಿಳಿದ ಕೂಡಲೇ, ಖುಸ್ರೂವನ್ನು ಪಂಜಾಬಿನವರೆಗೆ ಓಡಿಸಿ, ಅಲ್ಲಿಯೇ ಅವನನ್ನು ಬಂಧಿಸಿ ಹಾಕಿದನು. ಖುಸ್ರೂ ಅಲ್ಲಿಯ ಸೆರೆಯಲ್ಲಿಯೇ ತೀರಿಹೋದನು.



ಜಹಾಂಗೀರನಲ್ಲಿ ನ್ಯಾಯಬುದ್ಧಿ ಎಚ್ಚರವಾಗಿತ್ತೆಂದೇ ಹೇಳಬಹುದು. ನ್ಯಾಯಕ್ಕಾಗಿ ಅವನು ದೀಕ್ಷೆ ಹಿಡಿದು ಕೆಲಸ ಮಾಡಿದನು. ಆಗ್ರಾದ ತನ್ನ ಭವನದ ದ್ವಾರದಿಂದ ಯಮುನಾ ನದಿಯ ತೀರದ ವರೆಗೆ, ಅರುವತ್ತು ಗಂಟೆಗಳು ನೇತಾಡುವ ಒಂದು ಸಂಕಲೆಯನ್ನು ಕಟ್ಟಿಸಿ, ಯಾರು ಯಾವ ಸಮಯದಲ್ಲಿ ಬೇಕಾದರೂ ನ್ಯಾಯಕ್ಕಾಗಿ ರಾಜನನ್ನು ನೋಡಲು ನ್ಯಾಯದ ಸಂಕಲೆಯನ್ನೆಳೆದು ಗಂಟೆ ಬಾರಿಸಬಹುದೆಂದು ಪ್ರಕಟಪಡಿಸಿದನು.

ಇಂಗ್ಲೇಂಡಿನ ರಾಜ ಮೊದಲನೇ ಜೇಮ್ಸನ ಕಡೆಯಿಂದ ಕೇಪ್ಟನ್ ಹಾಕಿನ್ಸ್, ಸರ್ ಥಾಮಸ್ ರೋ ಎಂಬ ಇಬ್ಬರು ರಾಯಭಾರಿಗಳು ಬಂದು ಜಹಾಂಗೀರನನ್ನು ದರ್ಶನ ಮಾಡಿದರು. ಭಾರತ ದೇಶದಲ್ಲಿ ವ್ಯಾಪಾರ ಮಾಡುವ ವಿಷಯವಾಗಿ ಅವರು ಮಾತುಕತೆ ನಡೆಸಿದರು. ಸರ್ ಥಾಮಸ್ ರೋ ಜಹಾಂಗೀರನಿಂದ ವಿನಾಯಿತಿ ಪಡೆದು, ಆಂಗ್ಲರು ಭಾರತ ದೇಶವನ್ನು ಪ್ರವೇಶಿಸಲು ದಾರಿ ತೋರಿಸಿದನು.





ಜಹಾಂಗೀರನ ಕಾಲದಲ್ಲಿ ನಡೆದ ಮತ್ತೊಂದು ಮುಖ್ಯ ಸಂಘಟನೆ, ಮೇವಾರ್ ಪರಗಣೆ ಮೊಗಲ್ ಸಾಮ್ರಾಜ್ಯದೊಂದಿಗೆ ಕೂಡಿದುದು. ರಾಣಾ ಪ್ರತಾಪ್ ಕೊನೆಯ ಕ್ಷಣದ ವರೆಗೂ ಮೊಗಲರನ್ನು ಇದಿರಿಸಿ ಹೋರಾಡಿದರೂ, ಅವನ ಮಗ ರಾಣಾ ಅಮರಸಿಂಗ್ ಅಷ್ಟು ಧೈರ್ಯ ತೋರಿಸಲಾರದೆ ಹೋದನು. ಜಹಾಂಗೀರನ ಅಧಿಕಾರಕ್ಕೆ ತಲೆಬಾಗಿ ಬಿಟ್ಟನು.

ಜಹಾಂಗೀರನ ಮರಣಾ ನಂತರ ಅವನ ಮಗ ಯುವರಾಜ ಖುರ್ರಂ, ತನ್ನನ್ನು ಇದಿರಿಸಿದ ತಮ್ಮನಾದ ಷಾರಿಯಾರನನ್ನೂ, ಮತ್ತೆ ಕೆಲವು ಯುವರಾಜರನ್ನೂ ಕೊಂದು, ಷಾಜಹಾನ್ ಎಂಬ ಹೆಸರಿನಿಂದ ಮೊಗಲ್ ಸಿಂಹಾಸನವನ್ನು ಅಧಿಷ್ಠಿಸಿದನು.





ಷಾಜಹಾನನು ವಿಲಾಸಪ್ರಿಯನು. ಅಪಾರವಾದ ಧನವನ್ನು ವ್ಯಯಿಸಿ ತನಗಾಗಿ ಮಯೂರ ಸಿಂಹಾಸನವನ್ನು ಮಾಡಿಸಿದನು. ಮೊಗಲ್ ರಾಜ್ಯದ ಅಂತರ್ಭಾಗವಾದ ಕಂದ ಹಾರವನ್ನು, ಪರ್ಷಿಯಾ ಷಾಹನು ವಶಪಡಿಸಿಕೊಂಡಾಗ ಷಾಜಹಾನ್ ಅದಕ್ಕಾಗಿ ಹೋರಾಡಿದ್ಧನಾದರೂ, ಅದನ್ನು ಮತ್ತೆ ಹಿಡಿಯಲಾರದೆ ಹೋದನು.

ಢಿಲ್ಲಿಯಲ್ಲಿ ಪ್ರಸಿದ್ಧವಾದ ಕೆಂಪು ಕೋಟೆ ಮೊದಲಾದ ಬ್ರಹ್ಮಾಂಡದಂತಹ ಭವನಗಳನ್ನು ನಿರ್ಮಿಸಿದವನು ಷಾಜಹಾನನೇ. ಕೆಂಪು ಕೋಟೆಯ ಒಳಗಿನ "ದಿವಾನ್-ಇ-ಖಾಸ್" ಎಂಬ ಮಂಡಪದ ಗೋಡೆಯಲ್ಲಿ "ಭೂಮಿಯಲ್ಲಿ ಸ್ವರ್ಗವೆಂಬುದು ಇರುವುದಾದರೆ ಅದು ಇಲ್ಲಿಯೇ! ಅದು ಇಲ್ಲಿಯೇ! ಅದು ಇಲ್ಲಿಯೇ!" ಎಂದು ಕೆತ್ತಿಸಿರುವನು.





ಪಟ್ಟದ ರಾಣಿ ಮುಮ್ತಾಜಳ ಮೇಲೆ
ಹೇಳಲಾಗದಷ್ಟು ಪ್ರೇಮಾಭಿಮಾನಗಳಿದ್ದುವು.
ದಾರಾ, ಸುಜಾ, ಔರಂಗಜೇಬ್, ಮುರಾದ್
ಎಂಬ ನಾಲ್ವರು ಮಕ್ಕಳನ್ನು ಹೆತ್ತ ಮುಮ್ತಾಜ್
ಷಾಜಹಾನನ ಜೀವಿತದಲ್ಲಿ ತುಂಬಾ ಸುಖ
ಸಂತೋಷಗಳನ್ನುಂಟು ಮಾಡಿದಳು.

ಆದರೆ ಮುಮ್ತಾಜ್ ಅಕಾಲ ಮರಣಕ್ಕೆ ವಶ
ಳಾದುದರಿಂದ ಷಾಜಹಾನ್ ದಿಗ್ಭ್ರಾಂತನಾದನು.
ಹೆಂಡತಿಯ ಸಮಾಧಿಯ ಮೇಲೆ ಅದ್ಭುತವಾದ
ತಾಜ್‌ಮಹಲನ್ನು ಎಬ್ಬಿಸಿದನು. ಪೂರ್ತಿ ಹಾಲು
ಗಲ್ಲುಗಳಿಂದ ನಿರ್ಮಿಸಲ್ಪಟ್ಟ ತಾಜಮಹಲ್,
ಪ್ರಪಂಚದ ಅತ್ಯದ್ಭುತವಾದ ಶಿಲ್ಪಕಲಾ ಖಂಡ
ವಾಗಿ ಬೆಳಗಿಕೊಂಡಿದೆ.





ಷಾಜಹಾನನ ಕೊನೆಯ ದಿನಗಳು ವಿಷಾದದಿಂದ
ಕಳೆದುವು. ಔರಂಗಜೇಬ್ ತನ್ನ ಅಣ್ಣ ತಮ್ಮಂದಿ
ರನ್ನು ಕೊಂದು ತಂದೆ ಷಾಜಹಾನನನ್ನು ಕೋಟೆ
ಯೊಳಗೇ ಸೆರೆಯಿಟ್ಟನು. ಮಗಳು ಜಹಮಾರಾಳ
ರಕ್ಷಣೆಯಲ್ಲಿ, ಯಮುನಾ ನದಿಯ ಆಚೆಯ ಬದಿ
ಯಲ್ಲಿರುವ ತಾಜಮಹಲನ್ನು ವಿಚಾರದಿಂದ
ನೋಡುತ್ತ ೧೬೬೬ ನೇ ವರ್ಷದಲ್ಲಿ ಷಾಜಹಾನ್
ಸೆರೆಮನೆಯಲ್ಲೇ ಕಣ್ಣು ಮುಚ್ಚಿದನು.



# ಹಕ್ಕಿಜೋಸ್ಯ

ಕೈರೋ ನಗರದಲ್ಲಿ ಮುಸ್ತಫಾ ಎಂಬ ವರ್ತಕನು ಬಹುದೊಡ್ಡ ಧನಿಕನಾಗಿದ್ದನು. ಅವನಷ್ಟು ಸ್ಥಿರಚರ ಸೊತ್ತುಗಳಿಂದ ಕೂಡಿದ ವರ್ತಕನು ಕೈರೋನಗರದಲ್ಲಿ ಬೇರೊಬ್ಬನಿಲ್ಲವೆಂದು ಹೇಳಿಕೊಳ್ಳುತ್ತಿದ್ದರು. ಅವನಿಗೆ ಒಬ್ಬಳೇ ಮಗಳ ಹೊರತು ಬೇರೆ ಮಕ್ಕಳಿರಲಿಲ್ಲ. ಆ ಮಗಳು ಅತ್ಯಂತ ಸುಂದರಿಯಾಗಿದ್ದಳು. ತಂದೆಯ ಸಕಲ ಆಸ್ತಿಗಳಿಗೂ ಅವಳೇ ವಾರಸಳಾಗುವಳು.

ಆದುದರಿಂದ ಯಾವ ಸುಲ್ತಾನನ ಕುಮಾರನೋ ಅವಳನ್ನು ವಿವಾಹ ಮಾಡಿಕೊಳ್ಳಬಹುದೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರು. ಅವಳ ತಂದೆ ತಾಯಿಗಳಿಗೆ ಕೂಡ, ಯೋಗ ಕೂಡಿ ಬರುವ ಯಾವುದೋ ಒಂದು ದಿನ ಅಂತಹ ದೊಡ್ಡ ವರನೊಂದಿಗೆ ಮಗಳ ಮದುವೆಯಾಗುತ್ತದೆಂದು ಗಟ್ಟಿಯಾದ ನಂಬುಗೆ ಇದ್ದಿತು. ಆ ವರ್ತಕನ ಮನೆಯಲ್ಲಿ ಕಮಲ್ ಎಂಬ ಗುಲಾಮ ಹುಡುಗನು ಕೆಲಸದಾಳಾಗಿ ದುಡಿಯುತ್ತಿದ್ದನು. ವರ್ತಕನು ಅವನನ್ನು ಒಂದು ವರ್ಷದ ಕೆಳಗೆ ಗುಲಾಮರ ಸಂತೆಯಲ್ಲಿ ಕೊಂಡು ಕೊಂಡು ಮನೆಗೆ ತಂದಿದ್ದನು.

ಅವನು ಗುಲಾಮನಾದರೂ ಅಂದಚೆಂದಗಳುಳ್ಳ ಹುಡುಗ. ಬುದ್ಧಿವಂತಿಕೆಯಲ್ಲಿ ಯುಕ್ತಿಗಾರನಾಗಿಯೂ ಇದ್ದನು. ಅವನು ತನ್ನ ಯಜಮಾನನ ಮಗಳನ್ನು ಮದುವೆ ಮಾಡಿಕೊಳ್ಳಬೇಕೆಂದುಕೊಂಡು, ಅದಕ್ಕಾಗಿ ತಾನು ಎಲ್ಲಾ ವಿಧದಲ್ಲಿಯೂ ಅರ್ಹನಾಗಿರುವೆನೆಂದೇ ತಿಳಿದಿದ್ದನು.

ಆದರೆ ಈ ಸಂಗತಿಯನ್ನು ಅವನು ಯಾರೊಡನೆಯೂ ಹೇಳಲಿಲ್ಲ. ಅವನು ಆ ಮನೆಯಲ್ಲಿ ಬಂದು ಸೇರಿದ ಒಂದು ವರ್ಷಕಾಲದಲ್ಲಿ ಸಂಪಾದಿಸಿಕೊಂಡ ಸೊತ್ತೆಂದರೆ, ಒಂದು ಉಂಗುರ ಮತ್ತು ಒಂದು ದ್ರಾಕ್ಷಾಸಾರಾಯಿ ತುಂಬಿದ ಸೀಸೆ, ಇವಿಷ್ಟೇ. ಇವೆರಡನ್ನು ಅವನು ಸಮೀಪದಲ್ಲಿದ್ದ ಮತ್ತೊಬ್ಬ ಚಿಕ್ಕ ವರ್ತಕನ ಮನೆಯಿಂದ ಕದ್ದುಕೊಂಡು ಬಂದಿದ್ದನು.

ಅವುಗಳನ್ನು ಬಹುಮಾನವಾಗಿ ಕೊಟ್ಟು ತನ್ನ ಒಡೆಯನ ಮಗಳನ್ನು ಮದುವೆ ಮಾಡಿಕೊಳ್ಳಬಹುದೆಂದು ತಿಳಿದುಕೊಳ್ಳುವಷ್ಟು ಮೂಢನು ಅವನಲ್ಲ. ಅದಕ್ಕಾಗಿ ಅವನು ಒಂದು ಅಪೂರ್ವವಾದ ಪಥಕವನ್ನೇ ಹಾಕಿಕೊಂಡಿದ್ದನು.



ಉರಿಬೇಸಿಗೆಯ ಕಾಲದಲ್ಲಿ ಒಂದು ದಿನ ಸಾಯಂಕಾಲವಾಗುತ್ತ, ತಣ್ಣಗಿನ ಗಾಳಿ ಪ್ರಾರಂಭವಾಯಿತು. ವರ್ತಕನೂ ಅವನ ಹೆಂಡತಿಯೂ, ಮಗಳೂ ತೋಟದಲ್ಲಿ ಗಾಳಿ ಸೇವನೆಗಾಗಿ ನಡೆಯಲು ಹೊರಟರು. ಕಮಲ್ ಗುಲಾಮನೂ ಅವರ ಹಿಂದೆ ನಡೆಯುತ್ತಿದ್ದನು. ಯಜಮಾನನಿಗೆ ಯಾವ ಕ್ಷಣದಲ್ಲಿ ಏನು ಬೇಕಾದರೂ ಮಾಡಲು, ಕರೆದ ಬಾಯಿಗೆ ಓಗೊಡಲು ಗುಲಾಮನು ಜತೆಯಲ್ಲಿರಲೇ ಬೇಕು.

ವರ್ತಕನೂ ಅವನ ಹೆಂಡತಿಯೂ ತಮ್ಮ ಗೃಹಕೃತ್ಯವನ್ನು ಕುರಿತು ಏನೇನೋ ಮಾತಾಡಿಕೊಳ್ಳುತ್ತಿದ್ದರು. ವರ್ತಕನ ಮಗಳು ಮರಗಳ ಕೊಂಬೆಯಲ್ಲಿ, ಹಾರೋಡಿಕೊಂಡಿರುವ ಅಳಿಲುಗಳನ್ನೂ, ಹಕ್ಕಿಗಳನ್ನೂ ನೋಡಿ ಉತ್ಸಾಹದಿಂದ ಚಪ್ಪಾಳೆ ತಟ್ಟುತ್ತ ನಗುತ್ತಿದ್ದಳು. ಕಮಲ್ ಅಲ್ಲಿ ತಿರುಗುವ ಪಕ್ಷಿಗಳನ್ನು ಪರೀಕ್ಷಿಸಿ ನೋಡುತ್ತ, ಕಿವಿಗಳನ್ನು ಮಾಲಿಸಿ ಏನೋ ಆಲಿಸುತ್ತ, ಮುಗುಳು ನಗುತ್ತ, ತನಗೆ ತಾನೇ ಏನೋ ಗೊಣಗಿಕೊಳ್ಳುತ್ತಿದ್ದನು.

ವರ್ತಕನು ಕಮಲ್ ಗುಲಾಮನ ರೀತಿಯನ್ನು ಗಮನಿಸಿದರೂ ಮೊದಮೊದಲು ಏನೂ ಮಾತಾಡಲಿಲ್ಲ. ಆದರೆ ಅವನು ಪದೇ ಪದೇ ಮೇಲೆ ನೋಡಿ ಗೊಣಗುವುದನ್ನು ನೋಡಿ, ಅವನಿಗೆ ಆಶ್ಚರ್ಯವೆನಿಸಿ, ಹಾಗೇಕೆ ಮಾಡುವೆಯೆಂದು ಕೇಳಿದನು.

ಕಮಲ್ ಉತ್ತರವೇನೂ ಕೊಡದೆ ತಲೆತಗ್ಗಿಸಿಕೊಂಡನು.

"ಹುಚ್ಚ! ನಿನ್ನ ರೀತಿ ನೋಡಿದರೆ ಹಕ್ಕಿಗಳ ಮಾತನ್ನು ಅರ್ಥಮಾಡಿಕೊಂಡ ಹಾಗೆ ಕಾಣುತ್ತೆ!" ಎಂದು ವರ್ತಕನು ನಗುತ್ತಾ ಹೇಳಿದನು.

ಅದನ್ನು ಕೇಳಿ ವರ್ತಕನ ಹೆಂಡತಿಯೂ, ಮಗಳೂ ಸಹ ನಗಾಡಿದರು. ಆದರೆ ಕಮಲ್ ತನ್ನ ರಹಸ್ಯವೇನೋ ಹೊರಬಿದ್ದವನಂತೆ ಅವರ ಕಡೆಗೆ ಆಶ್ಚರ್ಯದಿಂದ ನೋಡಿದನು.

ಆದರಿಂದ ವರ್ತಕನಿಗೆ ಕುತೂಹಲ ಹೆಚ್ಚಾಯಿತು.

"ನೀನು ಮೇಲೆ ನೋಡಿ ಗೊಣಗುವುದು ಏನನ್ನು? ಅದನ್ನು ಸ್ಪಷ್ಟವಾಗಿ ಹೇಳೋ" ಎಂದನು ವರ್ತಕ.

"ಅದು, ಅದು, ಯಜಮಾನರೇ, ನೀವು ಅಂದುಕೊಂಡದ್ದು ನಿಜ. ಹಕ್ಕಿಗಳು ಹೇಳುವುದು ನನಗೆ ಅರ್ಥವಾಗುತ್ತದೆ" ಎಂದನು ಕಮಲ್ ತಗ್ಗಿದ ದನಿಯಲ್ಲಿ.

ಅವನ ಮಾತು ಕೇಳಿ ನಗಬೇಕೋ, ತನ್ನ ಗುಲಾಮನಿಗೆ ಗಟ್ಟಿಯಾಗಿ ಬಯ್ದು ಹೆದರಿಸಬೇಕೋ ಎಂಬುದು ವರ್ತಕನಿಗೆ ಗೊತ್ತಾಗಲಿಲ್ಲ. ಅಷ್ಟರಲ್ಲಿ ಅವರ ಪಕ್ಕದಲ್ಲಿದ್ದ ಒಂದು ಕೊಂಬೆಯ ಮೇಲೆ ಕಾಗೆಯೊಂದು ಗಟ್ಟಿಯಾಗಿ ಕೂಗಿತು.

"ಆ ಕಾಗೆ ಏನು ಹೇಳುತ್ತದೆ?" ಎಂದು ವರ್ತಕನು ಕಮಲ್‌ನನ್ನು ಕೇಳಿದನು.



"ಅದು ಒಂದು ಸಣ್ಣ ದ್ರಾಕ್ಷಾಸಾರಾಯಿ ಸೀಸೆ ಈ ಮರದ ಬುಡದಲ್ಲಿ ಹುಗಿದಿಡಲ್ಪಟ್ಟಿದೆ ಎನ್ನುತ್ತದೆ. ಅವಕ್ಕೆ ಅದು ಬೇಡವಂತೆ" ಎಂದನು ಕಮಲ್.

"ಹೌದೇನು ? ನಿನ್ನ ಹುಚ್ಚು ಈಗಲೇ ಬಿಡಿಸಿ ಬಿಡುತ್ತೇನೆ ಎಂದು ವರ್ತಕನು ತೋಟಮಾಲಿ ಬಿಟ್ಟುಹೋಗಿದ್ದ ಗುದ್ದಲಿಯನ್ನು ಎತ್ತಿ ಆ ಮರದ ಬುಡದಲ್ಲಿ ಸ್ವತಃ ಅಗೆಯ ತೊಡಗಿದನು. ಅಲ್ಲಿ ಸೀಸೆಯೊಂದಿರುವುದೆಂಬ ನಂಬುಗೆ ಅವನಿಗೆ ರವಷ್ಟೂ ಇರಲಿಲ್ಲ. ಸ್ವಲ್ಪ ಅಗೆದು ತೋರಿಸಿ, ತನ್ನ ಗುಲಾಮನು ಬಡಾಯಿ ಕೊಚ್ಚದಂತೆ ಬುದ್ಧಿ ಹೇಳಬೇಕೆಂದು ಕೊಂಡನು.

ಆದರೆ ಸತ್ಯವಾಗಿಯೂ ಅಗೆಯುವಾಗ ಬಂದು ಮಾಡಿದ್ದ ದ್ರಾಕ್ಷಾರಸದ ಸೀಸೆಯೊಂದು ಅವನ ಕೈಗೆ ಸಿಕ್ಕಿತು. ಅದನ್ನು ನೋಡಿ ವರ್ತಕನು ನಿಶ್ಚೇಷ್ಟಿತನಾದನು. ಅವನ ಹೆಂಡತಿಯೂ ಮಗಳೂ ಕಮಲ್‌ನನ್ನು ಭಯಾಶ್ಚರ್ಯಗಳಿಂದ ಕಣ್ಣಗಲಿಸಿ ನೋಡ ತೊಡಗಿದರು.

ಅಷ್ಟರಲ್ಲಿ ಒಂದು ಚಿಕ್ಕ ಹಕ್ಕಿ ಅವರ ತಲೆಯ ಮೇಲಿಂದಾಗಿಯೇ ಹಾರುತ್ತಾ ಕಿಚಕಿಚನೆ ಅರಚಿತು. ಕಮಲ್ ಅದನ್ನು ನೋಡಿ ಕಣ್ಣಗಲಿಸಿ ತಲೆಯಾಡಿಸಿ, ಸುಮ್ಮನೆ ನಿಂತನು.

"ಈ ಪಕ್ಷಿ ಕೂಡಾ ಏನಾದರೂ ರಹಸ್ಯ ಹೇಳಿತೇನು ?" ಎಂದು ವರ್ತಕನ ಹೆಂಡತಿ ಕಮಲ್‌ನನ್ನು ಕೇಳಿದಳು.

"ಅಲ್ಲಿ ಕಾಣುವ ಮರದ ಮೇಲಿರುವ ಹಕ್ಕಿಯ ಗೂಡಿನಲ್ಲಿ ಒಂದು ಉಂಗುರವಿದೆಯಂತೆ. ಅದನ್ನೇನು ಮಾಡುವುದಪ್ಪಾ ಎನ್ನುತ್ತದೆ ಆ ಹಕ್ಕಿ" ಎಂದನು ಕಮಲ್.

ಆ ಮಾತು ಕೇಳಿದ ಕೂಡಲೇ ವರ್ತಕನು ಅತ್ಯಾತುರದಿಂದ, ಯಾವ ನೌಕರರನ್ನೂ ಕರೆಯಲು ಹೋಗದೆ, ತಾನೇ ಸ್ವತಃ ಆ ಮರದ ಮೇಲೇರಿದನು, ಅಲ್ಲಿ ನಿಜವಾಗಿಯೂ ಹಕ್ಕಿಯ ಗೂಡಿನಲ್ಲಿ ಒಂದು ಉಂಗುರ ಅವನಿಗೆ ಸಿಕ್ಕಿತು.

ವರ್ತಕನು ಮರದಿಂದಿಳಿದು ಕಮಲ್‌ನನ್ನು ಆವೇಶದಿಂದ ಆಲಿಂಗಿಸಿ, "ಆಹಾ! ನಿನ್ನಷ್ಟು ಬುದ್ಧಿವಂತನಾದವನು ಈ ಭೂಪ್ರಪಂಚದಲ್ಲಿ ಇನ್ನೊಬ್ಬನಿಲ್ಲ!" ಎಂದನು.

"ನಿಮ್ಮ ಮಾತು ಮೂರು ಕಾಲಕ್ಕೂ ನಿಜ" ಎಂದಳು ವರ್ತಕನ ಹೆಂಡತಿ.

ಆ ಸಮಯದಲ್ಲಿ ಸಮೀಪದಲ್ಲಿ ಪೊದರಿನ ಮೇಲಿನಿಂದ ಅನೇಕ ಪಕ್ಷಿಗಳು ಕಲಕಲರವ ಮಾಡಿದುವು. ಕಮಲ್ ಆ ಕಡೆಗೆ ಕೋಪದಿಂದ ನೋಡುತ್ತ "ಸಾಕು ಸಾಕು ! ಬಾಯಿ ಮುಚ್ಚಿಕೊಂಡು ಹೋಗಿರಿ !" ಎಂದು ಕೂಗಿ ಕೈಗಳನ್ನಾಡಿಸಿದನು.

"ಅಷ್ಟು ಸಿಟ್ಟೇಗೇನಾಯಿತು ? ಅವುಗಳು ಏನು ಹೇಳಿದುವು ?" ಎಂದು ವರ್ತಕನು ಕೇಳಿದನು. "ಆ ಸಂಗತಿ ಮಾತ್ರ ಹೇಳಲು ಒತ್ತಾಯಿಸಬೇಡಿ

ಅಯ್ಯೊ, ಆಗದ ಹೋಗದ ಮಾತುಗಳು !" ಎಂದು ಕಮಲ್ ನಾಚಿಕೆಯಾದಂತೆ ಮುಖ ಮಾಡಿಕೊಂಡನು.

"ಆದಾಗದು, ನೀನು ಹೇಳಿ ತೀರಬೇಕು" ಎಂದು ವರ್ತಕನು ಅಧಿಕಾರವಾಣಿಯಿಂದ ಒತ್ತಾಯಿಸಿದನು.

ಕಮಲ್ ಸುಮ್ಮನಿರುವುದನ್ನು ನೋಡಿ ವರ್ತಕನ ಹೆಂಡತಿ, "ನೀನು ಬಹಳ ಒಳ್ಳೆಯವನೆಂದು ನಮಗೆ ಗೊತ್ತಿದೆ. ಅದನ್ನು ಮುಚ್ಚಿಡಬಾರದು. ಹೇಳು" ಎಂದಳು.

"ಅದನ್ನು ಹೇಳುವುದಕ್ಕಿಂತ ಸಾಯುವುದೇ ಮೇಲು. ಹೇಳಿದರೆ ಹೇಗೂ ನಿಮ್ಮ ಕೈಯಲ್ಲಿ ನನಗೆ ಸಾವು ಖಂಡಿತ" ಎಂದನು ಕಮಲ್ ಹೆದರುತ್ತ.

"ನಿನ್ನ ಜೀವಕ್ಕೆ ಯಾವ ಹಾನಿಯೂ ಇಲ್ಲವೆಂದು ನಾನು ಮಾತು ಕೊಡುತ್ತೇನೆ" ಎಂದನು ವರ್ತಕ.

"ಅಪ್ಪ ಮಾತು ತಪ್ಪದ ಹಾಗೆ ನಾನು ನೋಡಿ ಕೊಳ್ಳುತ್ತೇನೆ. ಆಯಿತಪ್ಪೆ ? ಹೇಳಿಬಿಡು" ಎಂದಳು ವರ್ತಕನ ಮಗಳು.

"ಸರಿ. ನಿಮಗೆ ಅದನ್ನು ಕೇಳಲೇ ಬೇಕೆಂದಿದ್ದರೆ ನಾನೇನೂ ಮಾಡುವಂತಿಲ್ಲ" ಎಂದು ಕಮಲ್ ಹೇಳಲು ಇಷ್ಟವಿಲ್ಲದವನ ಹಾಗೆ ಮುಖಮಾಡಿ ಕೊಂಡು, "ನಿಮ್ಮ ಕುಟುಂಬಕ್ಕೆ ದೊಡ್ಡ ಆಪತ್ತು ಬರುತ್ತದೆಂದು ಹಕ್ಕಿಗಳು ಹೇಳುತ್ತವೆ. ಆದರಿಂದ ತಪ್ಪಿಸಿಕೊಳ್ಳಬೇಕಾದರೆ ನಿಮ್ಮ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಬೇಕಂತೆ". ಎಂದನು. ಆ ಮಾತು ಕೇಳಿ ವರ್ತಕನೂ, ಹೆಂಡತಿಯೂ, ಮಗಳೂ ಬೆರಗು ಬಡೆದು ಬೆಪ್ಪರಂತಾದರು. ವರ್ತಕನು ಒಂದೆರಡು ಕ್ಷಣಗಳಲ್ಲಿ ಗಂಟಲು ಕೆನೆದು ಕೊಂಡು, "ಕಮಲ್, ನೀನು ಬಡವನೆಂಬೊಂದು ಸಂಗತಿ ಮರೆತುಬಿಟ್ಟರೆ ಉಳಿದೆಲ್ಲದರಲ್ಲಿ ನಮ್ಮ ಮಗಳಿಗೆ ತಕ್ಕವನೆಂಬುದು ನಿಜವೇ. ಆದರೆ ಒಂದು ಸಾರಿ ನೀನು ನಮ್ಮ ಅಳಿಯನಾಗಿ ಬಿಟ್ಟರೆ ನನ್ನ ಸರ್ವಾಸ್ತಿಗೂ ವಾರಸನಾಗುವಿ ಎಂದು ಎಲ್ಲರಿಗೂ ತಿಳಿಯುತ್ತದೆ. ಆ ಪರಿಸ್ಥಿತಿಯಲ್ಲಿ ನೀನು ಎಲ್ಲಿ ಬೆಳೆದಿಯೋ ಎಂಬ ಸಂಗತಿಯನ್ನು ಯಾರೂ ಕೇಳುವುದಿಲ್ಲ" ಎಂದನು.

ವರ್ತಕನ ಹೆಂಡತಿ ಗಂಡನ ಮಾತಿಗೆ ಅನುಮೋದನೆ ನೀಡುವಂತೆ ತಲೆಯಾಡಿಸಿ, "ಮನುಷ್ಯರು ಕೇವಲ ಹೆಡ್ಡರು. ಪಕ್ಷಿಗಳ ಬುದ್ಧಿ ಎಂಥ ಸೂಕ್ಷ್ಮ! ಎಷ್ಟು ಚುರುಕು ! ಈ ಮದುವೆಯಿಂದ ನಮ್ಮ ಕುಟುಂಬಕ್ಕೆ ಮೇಲಾಗುತ್ತದೆನ್ನುತ್ತವೆ ಪಕ್ಷಿಗಳು, ಕೂಡಲೇ ಈ ಮದುವೆ ಮಾಡಿಬಿಡುವುದೇ ಒಳ್ಳೆಯದು" ಎಂದಳು.

ಮತ್ತೆ ಕೆಲವೇ ದಿನಗಳಲ್ಲಿ ಕಮಲ್‌ಗೆ ವರ್ತಕನ ಮಗಳೊಂದಿಗೆ ಅತಿ ವೈಭವದಿಂದ ಮದುವೆ ಯಾಯಿತು.





# ಗುಂಡಿಗೆ ಚಿಕಿತ್ಸೆ

ಒಂದು ಊರಿನಲ್ಲಿ ದಾಮಯ್ಯನೆಂಬೊಬ್ಬ ದೊಡ್ಡ ಆಸ್ತಿವಂತನಿದ್ದನು. ಅವನಿಗೆ ಎದೆ ನೋವು ಬಂದು ಹಾಸಿಗೆ ಹಿಡಿದನು. ಅವನನ್ನು ನೋಡಿ ಹೋಗಲು ಪಕ್ಕದ ಊರಿನಲ್ಲಿರುವ ಅವನ ಸೋದರಳಿಯನಾದ ಸದಾನಂದನು ಬಂದನು. ಸದಾನಂದನ ಜತೆಯಲ್ಲಿ ಅವನ ಸ್ನೇಹಿತನಾದ ಚಿದಾನಂದನೂ ಇದ್ದನು.

ಸೋದರಳಿಯನು ತನ್ನನ್ನು ನೋಡಲು ಬಂದುದರಿಂದ ದಾಮಯ್ಯನಿಗೆ ಬಹಳ ಸಂತೋಷವಾಯಿತು. ಆದರೆ ಸರಿಯಾಗಿ ಮಾತಾಡಲಾಗದ ನೀರಸ ಸ್ಥಿತಿಯಲ್ಲೇ ಇದ್ದನು. ಮಾವಯ್ಯನ ಪರಿಸ್ಥಿತಿಯನ್ನು ನೋಡಿ ಸದಾನಂದನಿಗೆ ಮನಸ್ಸು ಕರಗಿತು. ಏನೋ ಸಮಾಧಾನದ ಮಾತುಗಳನ್ನು ಹೇಳುತ್ತ, ಚಿಕಿತ್ಸೆಯನ್ನು ಕುರಿತು ಪರಿಸ್ಥಿತಿ ತಿಳಿದನು.

ಸೋದರಮಾವನಿಗೆ ಒಳ್ಳೆಯ ವೈದ್ಯರಿಂದ ಚಿಕಿತ್ಸೆ ನಡೆಯುವುದೆಂದು ತಿಳಿದು ಸದಾನಂದನಿಗೆ ಸಮಾಧಾನವಾಯಿತು. ಹಾಗೆ ಅನೇಕ ವಾರಗಳಿಂದ ಚಿಕಿತ್ಸೆ ಚೆನ್ನಾಗಿಯೇ ನಡೆಯುತ್ತಿದ್ದರೂ, ವ್ಯಾಧಿ ಮಾತ್ರ ಗುಣಮುಖವಾಗದಿರುವುದನ್ನು ನೋಡಿ ಅವನಿಗೆ ಆಶ್ಚರ್ಯವೂ ಆಯಿತು.

ಸದಾನಂದನು ಸೋದರಮಾವನೊಂದಿಗೆ ತನ್ನ ಮನೆಯ ಸಂಗತಿಯನ್ನೂ, ಬೇರೆ ಏನೇನೋ ಮಾತಾಡಲು ತೊಡಗಿದನು. ದಾಮಯ್ಯ ಅವನು ಹೇಳುವುದನ್ನೆಲ್ಲ ಮನಸ್ಸು ಕೊಟ್ಟು ಕೇಳುತ್ತಾ ಸುಮ್ಮನಿದ್ದನು.

ಹೀಗೆ ಸ್ವಲ್ಪ ಹೊತ್ತು ನಡೆಯಲು ದಾಮಯ್ಯನು ಬಹಳ ಕಷ್ಟದಿಂದ, "ಸದಾ, ನಿನ್ನ ಊರಿನಲ್ಲಿ ಚಂದ್ರಯ್ಯನ ಹೊಲಗಳಲ್ಲಿ ಈ ವರ್ಷ ಒಳ್ಳೇ ಬೆಳೆ ಬಂದಿತೇನು ? ನಿನಗೆ ಗೊತ್ತಿದ್ದೀತಲ್ಲವೆ ? " ಎಂದು ಒಂದು ಪ್ರಶ್ನೆ ಮಾಡಿದನು.

ಸದಾನಂದನು ಒಂದು ಕ್ಷಣ ಆಲೋಚಿಸಿ, ಏನೋ ಹೊಳೆದವನಂತೆ, "ಅದನ್ನೇನು ಕೇಳ್ತೀರಿ ಮಾವಯ್ಯಾ, ಏನು ಕರ್ಮವೋ ! ಅವರ ಇಡೀ ಹೊಲದ ಪೈರಿನ ಕದಿರುಗಳನ್ನೆಲ್ಲಾ ಪಟ್ಟೆಕೀಟ ಹೊಡೆದು ತಿಂದುಹಾಕಿ ಈ ವರ್ಷ ಅವರಿಗೆ ಭಾರೀ ಪೆಟ್ಟು. ದೊಡ್ಡ ಚಿಂತೆಯಲ್ಲಿದ್ದಾರೆ. ಮೊದಲಿನ ಹಾಗೆ ಚಿನ್ನದ ಹಿಡಿಬೆತ್ತ ಕುಟ್ಟಿಕೊಂಡು ಸಾಯಂಕಾಲ ಊರಕಟ್ಟೆಗೆ ಬಂದು ಪಂಚಾಯ್ತೀ ಹರಟುವುದನ್ನು ಪೂರ್ತಿ ನಿಲ್ಲಿಸಿಬಿಟ್ರು. ಮನೇಲೇ ಸದ್ದಿಲ್ಲದೆ ಒರಗಿಕೊಂಡಿರುತ್ತಾರೆ" ಎಂದನು.

ಕಮಲಿನಿ



"ಹಾಗೇನು!" ಎಂದು ದಾಮಯ್ಯ ಹಾಸಿಗೆ ಯಿಂದ ಎದ್ದು ಕುಳಿತುಕೊಳ್ಳಲು ನೋಡಿ, ಆಗದೆ, "ಈ ನಡುವೆ ಅವನ ಮಗಳಿಗೆ ಯಾರೋ ಜಮೀನ್ದಾರ್ರ ಸಂಬಂಧ ಬಂತೆಂದು ಯಾರೋ ಹೇಳಿದರು. ಆ ಮಾತು ನಿಜವೇನು? ಮದುವೆ ನಿಶ್ಚಯವಾಯಿತೇನು?" ಎಂದು ಪ್ರಶ್ನಿಸಿದನು.

ಕೂಡಲೇ ಸದಾನಂದನು ಸಣ್ಣಕೆ ನಕ್ಕು, "ಜನರ ನಾಲಗೆಗೆ ಎಲುವಿಲ್ಲ. ಅಲ್ಲ ಮಾವಯ್ಯಾ, ಆ ಹುಡುಗಿಗೆ ಜಮೀನ್ದಾರೀ ಸಂಬಂಧ ಬರುವ ಮಾತು ಬಿಟ್ಟು, ಅಸಲು ಮದುವೇನೇ ಆಗುವ ಯೋಗವಿಲ್ಲ ವೆಂದು ಜೋಯಿಸರು ನಿರ್ದಾಕ್ಷಿಣ್ಯವಾಗಿ ಹೇಳಿ ಬಿಟ್ಟರು. ಅದಕ್ಕಾಗಿ ಪಾಪ, ಜೋಯಿಸರ ಮೇಲೆ ಉರಿದುಬಿದ್ರು. ಜೋಯಿಸರೇನು ಮಾಡಿಯಾರು? ಪಾಪ, ಚಂದ್ರಯ್ಯನಿಗೆ ಅಷ್ಟೊಂದು ಆಸ್ತಿ ಪಾಸ್ತಿ ಇದ್ದರೇನು? ಮಗಳಿಗೆ ಮದುವೆಯ ಗೆರೆ ಇಲ್ಲ ಅಂತಲೇ ಕಾಣುತ್ತೆ!" ಎಂದನು.

ಆಮೇಲೆ ದಾಮಯ್ಯ ಅಳಿಯನ ಹತ್ತಿರ ಏನೂ ಕೇಳಲಿಲ್ಲ. ಆತನೊಂದಿಗೆ ಸದಾನಂದನು ಹೇಳಿದ ಮಾತುಗಳನ್ನು ಕೇಳಿ, ಅವನ ಸ್ನೇಹಿತ ಚಿದಾನಂದನಿಗೆ ಬಹಳ ಆಶ್ಚರ್ಯವಾಯಿತು. ಕೆಲವು ದಿನಗಳ ಕೆಳಗೆ ಸದಾನಂದನಿಗೂ ಚಂದ್ರಯ್ಯನಿಗೂ ಯಾವುದೋ ವಿಷಯದಲ್ಲಿ ಮಾತಿಗೆ ಮಾತು ಕಲೆತು ಸ್ವಲ್ಪ ಕಾವೇರಿತ್ತು. ಆ ಕೋಪವನ್ನು ಮನಸ್ಸಿನಲ್ಲಿಟ್ಟು ಕೊಂಡು ತನ್ನ ಸೋದರಮಾವನೊಂದಿಗೆ ಚಂದ್ರಯ್ಯ ನನ್ನು ಕುರಿತು ಸುಳ್ಳು ಹೇಳಿರಬೇಕೆಂದು ಚಿದಾನಂದನು ಅಂದುಕೊಂಡನು.

ಸ್ವಲ್ಪ ಹೊತ್ತಾದ ಮೇಲೆ ಸ್ನೇಹಿತರಿಬ್ಬರೂ ತಮ್ಮ ಊರಿಗೆ ಹಿಂದಿರುಗಿದರು. ಆಗ ದಾರಿಯಲ್ಲಿ ಚಿದಾನಂದನು ಸದಾನಂದನೊಂದಿಗೆ, "ಅಷ್ಟೊಂದು ರೋಗದಲ್ಲಿ ಕೂಡಾ ನಿನ್ನ ಸೋದರ ಮಾವ ಯಾವುದೋ ಊರಿನ ಮನುಷ್ಯನ ಯೋಗಕ್ಷೇಮ ವಿಚಾರಿಸಬೇಕಾದರೆ ಅವರ ಮನಸ್ಸು ಎಷ್ಟು ಒಳ್ಳೆಯ ದಿರಬೇಕು! ನೀನು ಮಾತ್ರ ಯಾವಾಗಲೋ ನಡೆದ ಅಲ್ಪ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು, ಚಂದ್ರಯ್ಯನಂಥ ದೊಡ್ಡ ಮನುಷ್ಯರನ್ನು ಕುರಿತು ನಿನ್ನ ಮಾವಯ್ಯನೊಂದಿಗೆ ಅಷ್ಟು ಅಲಕ್ಷ್ಯವಾಗಿ ಏಕೆ ಹೇಳಿದೆ? ಅದು ಬಹಳ ತಪ್ಪೆಂದು ನಿನಗೆ ಕಾಣುವುದಿಲ್ಲವೇ?" ಎಂದು ಕೇಳಿದನು.

"ಮುಖ್ಯವಾದ ಕಾರಣವೇ ಇತ್ತು! ಪರಿಣಾಮ ಒಳ್ಳೆಯದೇ ಆದೀತು." ಎಂದು ಸದಾನಂದನು ನಕ್ಕು ಸುಮ್ಮನಾದನು.

"ಏನು ಆ ಕಾರಣ? ಚಂದ್ರಯ್ಯನ ಹೊಲಗದ್ದೆ ಗಳು ಒಳ್ಳೆಯ ಫಸಲು ಕೊಟ್ಟಿವೆಯೆಂದೂ, ಅವರ ಮಗಳಿಗೆ ಜಮೀನ್ದಾರ್ರ ಕುಟುಂಬದ ಸಂಬಂಧವಿರುವ ಹುಡುಗನೊಂದಿಗೆ ನಿಶ್ಚಿತಾರ್ಥವಾಯಿತೆಂದೂ ನಿನಗೆ ಗೊತ್ತಿಲ್ಲವೆಂದರೆ ನಾನು ನಂಬುವೆನೆ?" ಎಂದನು ಚಿದಾನಂದ ಕೋಪದಿಂದ.

“ಅದೆಲ್ಲಾ ನನಗೆ ಗೊತ್ತಿಲ್ಲದ್ದೇನೂ ಅಲ್ಲ. ನಿನಗೆ ನನ್ನ ಸೋದರಮಾವನ ಸಮಾಚಾರ ಅಷ್ಟೇನೂ ತಿಳಿಯದು. ನನ್ನ ಮಾತೆಲ್ಲ ಮಾವಯ್ಯನಿಗೆ ಒಳ್ಳೆಯ ಚಿಕಿತ್ಸೆಯಂತಹುದು. ನಾನು ಹಾಗೆ ಹೇಳಿದುದರಿಂದ ಅವರ ಎದೆ ನೋವು ಬೇಗನೇ ಗುಣವಾಗಿ ಆರೋಗ್ಯಶಾಲಿಗಳಾಗುತ್ತಾರೆಂದು ನನ್ನ ನಂಬುಗೆ. ನೋಡುತ್ತಾ ಇರು” ಎಂದನು ಸದಾನಂದ.

ಹೇಳುವುದನ್ನು ಸ್ಪಷ್ಟವಾಗಿ ಹೇಳುವಂತೆ ಚಿದಾನಂದನು ಒತ್ತಿ ಕೇಳಿದನು.

ಆಗ ಸದಾನಂದನು, “ಈ ಸುತ್ತು ಮುತ್ತಲಿನ ಊರುಗಳಲ್ಲಿ ನನ್ನ ಸೋದರಮಾವನೂ, ಈ ಚಂದ್ರಯ್ಯನೂ ದೊಡ್ಡ ಭೂಮಾಲಿಕರು ಹೌದಷ್ಟೇ. ಸೋದರಮಾವ ಎಲ್ಲಾ ವಿಷಯದಲ್ಲಿಯೂ ಚಂದ್ರಯ್ಯನನ್ನು ತಮ್ಮ ಸ್ಪರ್ಧೆಗಾರನೆಂದೇ ತಿಳಿದಿದ್ದಾರೆ. ಅಂತಹ ವ್ಯಾಧಿಯಲ್ಲಿ ಕೂಡಾ ಅವರು ಚಂದ್ರಯ್ಯನನ್ನು ಕುರಿತು ಪ್ರಶ್ನೆ ಮಾಡಲು ಬೇರೆ ಯಾವ ಕಾರಣವೂ ಇಲ್ಲ. ಆ ಸಂದರ್ಭದಲ್ಲಿ ಚಂದ್ರಯ್ಯನ ನಿಜ ಸಂಗತಿಯನ್ನು ಹೇಳಿಬಿಟ್ಟರೆ ಮಾವಯ್ಯನ ಗುಂಡಿಗೆ ನಿಂತು ಹೋಗುವ ಅಪಾಯವಿದೆ. ಆ ಪಾಪ ನಾನೇಕೆ ಕಟ್ಟಿಕೊಳ್ಳಲಿ? ನಾಳೆ ನಿಜ ಸಂಗತಿ ತಿಳಿದಾಗ ಅದಕ್ಕೆ ತಕ್ಕ ಹಾಗೆ ಸಮಾಳಿಸಿಕೊಂಡರಾಯಿತು.” ಎಂದನು.

ಕೆಲವು ದಿನಗಳ ಮೇಲೆ ಚಿದಾನಂದನು ಏನೋ ಕೆಲಸದ ಮೇಲೆ ದಾಮಯ್ಯನಿರುವ ಊರಿಗೆ ಹೋಗಿ ಆತನನ್ನು ನೋಡಿದನು. ಆ ಸಮಯದಲ್ಲಿ ದಾಮಯ್ಯ ತನ್ನ ಆಳುಗಳೊಂದಿಗೆ ಹೊಲಗದ್ದೆಗಳ ಕೆಲಸವನ್ನು ಕುರಿತು ಮಾತಾಡುತ್ತಿರುವುದನ್ನು ನೋಡಿದನು. ಅವನು ಒಳ್ಳೆಯ ಆರೋಗ್ಯದಲ್ಲಿರುವಂತೆ ಕಂಡಿತು.

ಚಿದಾನಂದನನ್ನು ನೋಡಿ ದಾಮಯ್ಯ ನಗುತ್ತ, ಮಾತಾಡಿಸಿ, ತನ್ನ ಸೋದರಳಿಯನ ಕ್ಷೇಮವನ್ನು ಕೇಳಿ ತಿಳಿದು, “ಸದಾನಂದನನ್ನು ಸಮಯವಿದ್ದಾಗ ಒಮ್ಮೆ ಇಲ್ಲಿಗೆ ಬರುವಂತೆ ಹೇಳು. ಮೊದಲಿನ ಹಾಗೆ ನೀವಿಬ್ಬರೂ ಒಟ್ಟಿಗೇ ಬನ್ನಿರಿ” ಎಂದನು.

ಚಿದಾನಂದನು ಅಲ್ಲಿಂದ ಹಿಂದಿರುಗಿ ಊರಿಗೆ ಬಂದು ಸದಾನಂದನನ್ನು ನೋಡಿ, “ನಿನ್ನೆ ಒಂದು ಕೆಲಸವಿದ್ದುದರಿಂದ ನಿನ್ನ ಸೋದರ ಮಾವನ ಊರಿಗೆ ಹೋಗಿದ್ದೆ. ನಿನ್ನ ಮಾವನಿಗೆ ನೀನು ಮಾಡಿದ ಗುಂಡಿಗೆ ಚಿಕಿತ್ಸೆ ಒಳ್ಳೆಯ ಫಲಕೊಟ್ಟಿದೆ. ಅವರೀಗ ಒಳ್ಳೆಯ ಆರೋಗ್ಯದಿಂದಿದ್ದಾರೆ. ಆಳುಗಳೊಂದಿಗೆ ಸ್ವತಃ ನಿಂತು ಕೆಲಸ ಮಾಡಿಸುತ್ತಿದ್ದಾರೆ.” ಎಂದನು.

“ಈಗ ಗೊತ್ತಾಯಿತೇ ? ಆ ಚಿಕಿತ್ಸೆಯಿಂದ ಅವರ ಗುಂಡಿಗೆ ಗಟ್ಟಿಯಾಯಿತು. ಇನ್ನು ನಿಜ ತಿಳಿದರೂ ತಾಳಿಕೊಳ್ಳುವರು” ಎಂದು ನಕ್ಕನು ಸದಾನಂದ.





# ಸ್ತ್ರೀಗೆ ಪ್ರಿಯವಾದುದು

ಒಂದಾನೊಂದು ದೇಶದ ಒಬ್ಬ ರಾಜನು ತನ್ನ ರಾಣಿಯೊಂದಿಗೆ ಒಂದು ದಿನ ಪುಷ್ಪೋದ್ಯಾನದಲ್ಲಿ ವಿಹರಿಸಿಕೊಂಡಿದ್ದನು. ಆಗ ರಾಣಿ "ಮಹಾರಾಜಾ, ಸ್ತ್ರೀಗೆ ಎಲ್ಲಕ್ಕಿಂತಲೂ ಹೆಚ್ಚು ಪ್ರಿಯವಾದುದು ಏನೆಂಬುದನ್ನು ಹೇಳಿರಿ ನೋಡುವಾ" ಎಂದಳು.

ರಾಜನು ಸುತ್ತಲೂ ಇರುವ ಹೂವುಗಳ ಅಂದ ಚೆಂದಗಳನ್ನು ನೋಡಿ ತಲೆದೂಗುತ್ತ, "ಹೂವುಗಳು" ಎಂದನು.

"ಅಲ್ಲ!" ಎಂದಳು ರಾಣಿ.

ಹೆಂಗುಸಿಗೆ ಎಲ್ಲದಕ್ಕಿಂತ ಪ್ರಿಯವಾದುದು ಗಂಡನೆಂದೂ, ಮಕ್ಕಳೆಂದೂ, ಅಲಂಕಾರಗಳೆಂದೂ, ಸೀರೆಗಳೆಂದೂ ರಾಜನು ಏನೇನೋ ಹೇಳಿದನು. ಅವಾವುದೂ ಅಲ್ಲವೆಂದಳು ರಾಣಿ.

ರಾಣಿಯ ಪ್ರಶ್ನೆಗೆ ತಕ್ಕ ಉತ್ತರ ತಿಳಿಯಲೇಬೇಕೆಂದು ರಾಜನಿಗೆ ಹಟ ಹುಟ್ಟಿತು, ಅವನು ಕೂಡಲೇ ಒಂದು ಡಂಗುರ ಹೊಡೆಯಿಸಿದನು. ಸ್ತ್ರೀಗೆ ಅತ್ಯಂತ ಪ್ರಿಯವಾದದು ಯಾವುದೆಂಬುದನ್ನು ಹೇಳಿ ರಾಣಿಯನ್ನು ಒಪ್ಪಿಸಿದವರಿಗೆ ಸಾವಿರ ವರಹ ಬಹುಮಾನವೆಂದು ಪ್ರಕಟಿಸಲ್ಪಟ್ಟಿತು.

ಮರುದಿನ ರಾಜಸಭೆಗೆ ಜನರು ಉತ್ಸವಕ್ಕೆ ಬರುವ ಹಾಗೆ ಸಾಲುಸಾಲಾಗಿ ಬರತೊಡಗಿದರು. ಎಲ್ಲರೂ ರಾಣಿಯ ಪ್ರಶ್ನೆಗೆ ಉತ್ತರಕೊಡಲು ಬಂದವರೇ ಅಂತೆ! ಆಗ ರಾಜನು ಇನ್ನೊಂದು ಮಾತನ್ನು ಅವರೆಲ್ಲರಿಗೂ ತಿಳಿಸಿದನು: ಅವರು ಹೇಳುವ ಉತ್ತರವು ರಾಣೀ ದೇವಿಯವರಿಗೆ ಅಂಗೀಕಾರವಾಗದೆ ಹೋದರೆ ಬೆನ್ನಿಗೆ ಹತ್ತು ಕೊರಡೇ ಏಟು ಕೊಡಲಾಗವುದೆಂದನು. ಅದನ್ನು ಕೇಳಿದ ಮೇಲೆ ಒಬ್ಬರು ಕೂಡಾ ಏನೂ ಹೇಳದೆ ತಲೆತಗ್ಗಿಸಿಕೊಂಡು ಹೋಗಿಬಿಟ್ಟರು.

ಅದನ್ನು ನೋಡಿ ಮಹಾರಾಜನಿಗೆ ಕೋಪ ಬಂದಿತು. ಕೂಡಲೇ ಊರೊಳಗೆಲ್ಲ ಇನ್ನೊಂದು ಡಂಗುರವನ್ನು ಹಾಕಿಸಿದನು: ಮರುದಿನ ಬೆಳಗ್ಗೆ ರಾಜನು ಒಂದು ಪಾರಿವಾಳವನ್ನು ಬಿಡುತ್ತಾನೆ. ಅದು ಹೋಗಿ ಯಾರ ಮನೆಯ ಮೇಲೆ ಎರಗುವುದೋ ಆ ಮನೆಯಲ್ಲಿರುವವರಲ್ಲಿ ಯಾವನೋ ಒಬ್ಬನು ಬಂದು ರಾಣಿಯ ಪ್ರಶ್ನೆಗೆ ಸಮಾಧಾನ ಹೇಳಬೇಕು. ಆ ಸಮಾಧಾನವು ರಾಣಿಗೆ ಒಪ್ಪಿಗೆಯಾಗದಿದ್ದರೆ ಶಿರಶ್ಛೇದ!

ಮೊದಲನೇ ಡಂಗುರವನ್ನು ಕೇಳಿ ಜನರು ಎಷ್ಟು ಸಂಭ್ರಮ ಪಟ್ಟರೋ, ಈ ಎರಡನೇ ಡಂಗುರವನ್ನು

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ

ಕೇಳಿ ಅಷ್ಟೇ ಹೆದರಿದರು. ರಾಜನು ಇದೇ ವಿಧವಾಗಿ ದಿನಾ ಪಾರಿವಾಳವನ್ನು ಹಾರಿಸಿ, ರಾಣಿಯನ್ನು ಒಪ್ಪಿಸಲಾಗದ ಒಂದೊಂದು ಮನೆಯವನನ್ನೂ ತಲೆಕಡಿದು ಹಾಕುವನೆಂದು ಎಲ್ಲರಿಗೂ ಭಯ ಹುಟ್ಟಿತು. ಎಲ್ಲರೂ ಎಲ್ಲಿ ತಮ್ಮ ಮನೆಯ ಮೇಲೆ ಪಾರಿವಾಳ ಬಂದೆರಗುವುದೋ ಎಂದು ಹೆದರಿ ನಡುಗುವವರೇ !

ಮರುದಿನ ರಾಜನು ಹಾರಲು ಬಿಟ್ಟ ಪಾರಿವಾಳವು ಹಾರುತ್ತಾ ಹೋಗಿ, ದೂರದಲ್ಲಿದ್ದ ಒಬ್ಬ ಹಳ್ಳಿಯವನ ಮನೆಯ ಮೇಲೆ ವಾಲಿತು. ಅದರ ಹಿಂದೆಯೇ ಹೋದ ರಾಜಭಟರು, ಆ ಹಳ್ಳಿಯವನ ಮನೆಯೊಳಗೆ ಪ್ರವೇಶ ಮಾಡಿದರು. ಮನೆಯ ಯಜಮಾನನು ಮನೆಯಲ್ಲಿರಲಿಲ್ಲ. ಅವನ ಮಗನು ಬಲೆ ನೇಯುತ್ತಾ ಕುಳಿತಿದ್ದನು. ರಾಜಭಟರು ಅವನನ್ನು ಹಿಡಿದು ರಾಜನ ಬಳಿಗೆ ಕರೆದೊಯ್ದರು.

ರಾಜನು ಅವನಿಗೆ ಎಲ್ಲಾ ವಿಷಯವನ್ನೂ ಹೇಳಿ "ಸ್ತ್ರೀಗೆ ಪ್ರಿಯವಾದುದು ಯಾವುದು ?" ಎಂಬ ರಾಣಿಯ ಪ್ರಶ್ನೆಯನ್ನು ತಿಳಿಸಿ, ಇದಕ್ಕೆ ಉತ್ತರ ಹೇಳಬೇಕಾದುದು ಅವನ ವಿಧಿ ಎಂದೂ, ತಪ್ಪು ಉತ್ತರ ಹೇಳಿದರೆ ತಲೆ ಕಡಿಸುವೆನೆಂದೂ ಹೇಳಿದನು.

"ಹದಿನೈದು ದಿನ ಗಡುವು ಕೊಡಿರಿ ಸ್ವಾಮಿ. ತಕ್ಕ ಉತ್ತರ ಹೇಳುತ್ತೇನೆ" ಎಂದನು ಹಳ್ಳಿಯವನ ಮಗ.

ರಾಜನು ಅದಕ್ಕೆ ಒಪ್ಪಿಗೆ ಕೊಟ್ಟನು.

ಹದಿನೈದು ದಿನಗಳವರೆಗೂ ಆ ಹಳ್ಳಿಯವನ ಮಗನಿಗೆ ಕಾಲು ತೇದು ಹೋಗುವ ಹಾಗೆ ನಡೆಯುವುದೇ ಕೆಲಸವಾಯಿತು. ಅವನು ಎಷ್ಟೋ ಅಮ್ಮಂದಿರ ಹತ್ತಿರ, ಅಕ್ಕಂದಿರ ಹತ್ತಿರ, ತಂಗಿಯರ ಹತ್ತಿರ "ಹೆಂಗುಸರಿಗೆ ಎಲ್ಲದಕ್ಕಿಂತ ಹೆಚ್ಚು ಇಷ್ಟವಾದುದು ಯಾವುದು ?" ಎಂದು ಕೇಳಿದನು. ಕೆಲವರು ನಗಗಳೆಂದರು. ಕೆಲವರು ಮಕ್ಕಳೆಂದರು. ಒಟ್ಟಿನ ಮೇಲೆ ಒಬ್ಬರು ಹೇಳಿದ ಉತ್ತರ ಒಬ್ಬರು ಹೇಳಲಿಲ್ಲ. ಎಲ್ಲಾ ಉತ್ತರಗಳೂ ಎಲ್ಲರಿಗೂ ಗೊತ್ತಿರುವಂಥವೇ. ಹೊಸತಾದುದೇನೂ ಹೊರಬರಲಿಲ್ಲ. ಇಂತಹ ಸರ್ವಸಾಧಾರಣದ ಉತ್ತರಕ್ಕಾಗಿ ರಾಜನು ಇಷ್ಟೊಂದು ಆರ್ಭಟೆ ತೋರಿಸುವುದುಂಟೆ ?



ಹಳ್ಳಿಯವನ ಮಗನಿಗೆ ಏನೂ ಅರ್ಥವಾಗದೆ, ಗಡುವಿನ ಕೊನೆಯ ದಿನವೇ ತನ್ನ ಕೊನೆಯ ದಿನವೆಂದುಕೊಂಡನು. ಈ ಚಿಂತೆಯಿಂದ ಅವನು ಒಂದು ಕೆರೆಯ ದಂಡೆಯಲ್ಲಿ ದುಃಖಿಸುತ್ತಾ ಕುಳಿತನು. ಆಗ ಒಬ್ಬಳು ಹಣ್ಣು ಮುದುಕಿ ಯಾವುದಕ್ಕೋ ಅಲ್ಲಿಗೆ ಬಂದು, ದುಃಖದಿಂದ ಕುಳಿತ ಹುಡುಗನನ್ನು ನೋಡಿ, " ಏಕಪ್ಪಾ, ಇಷ್ಟೊಂದು ದುಃಖದಲ್ಲಿ ಕುಳಿತಿರುವೆಯೇಕೆ ? ಏನಾಯಿತು ? ಯಾರು ನೀನು ? " ಎಂದು ವಿಚಾರಿಸಿದಳು.

ಅವನು ಆ ಮುದುಕವ್ವನೊಂದಿಗೆ ಎಲ್ಲಾ ಸಮಾಚಾರವನ್ನೂ ಹೇಳಿದನು.

" ಹೌದು, ಮಹಾರಾಜನು ಎಬ್ಬಿಸಿದ ಗಲಾಟೆಯನ್ನು ನಾನು ಕೂಡಾ ಕೇಳಿದ್ದೇನೆ. ಅದೀಗ ನಿನ್ನ ತಲೆಗೆ ಬಂದಿದೆಯೇ ? ಕಂದಾ, ಇದನ್ನೆಲ್ಲಾ ನೋಡುವಾಗ ರಾಣಿ ಕೇಳುವ ಪ್ರಶ್ನೆಗೆ ಉತ್ತರ ಏನೂ ಅಂತ ಕಾಣುತ್ತಾ ಇದೆಯಲ್ಲಾ ! " ಎಂದಳು ಮುದುಕಿ.

" ಏನವ್ವಾ, ಏನು ಕಾಣುತ್ತದೆ ಉತ್ತರ ? " ಎಂದು ಅವನು ಆತುರದಿಂದ ಕೇಳಿದನು.

" ಇನ್ನೇನಿದೆಯಪ್ಪಾ ? ಗಂಡನ ಮೇಲೆ ಅಧಿಕಾರವೇ. ಅದೇ ಸ್ತ್ರೀಗೆ ಬಹಳ ಇಷ್ಟ. ಸಾಧಾರಣವಾಗಿ ಎಲ್ಲಾ ಗಂಡುಸರೂ ಸ್ತ್ರೀಯರ ಮೇಲೆ ಅಧಿಕಾರ ನಡೆಸಲು ನೋಡುತ್ತಾರೆ. ಅದು ಅವಳಿಗೆ ಇಷ್ಟವಿಲ್ಲ. ರಾಣಿಯನ್ನು ನೋಡಿದೆಯಾ ? ರಾಜನಿಂದ ಏಳುಕೆರೆ ನೀರು ಕುಡಿಸುತ್ತ ಹೇಗೆ ಆನಂದಿಸುತ್ತಿದ್ದಾಳೆ ! " ಎಂದು ಹೇಳಿ ಮುದುಕಿ, ದಂಟೆ ಕುಟ್ಟಿಕೊಂಡು ತನ್ನ ದಾರಿ ಹಿಡಿದು ಹೋದಳು.

ಮರುದಿನ ರಾಜಭಟರು ಬಂದು ಹಳ್ಳಿಯವನ ಮಗನನ್ನು ರಾಜನ ಬಳಿಗೆ ಕರೆದುಕೊಂಡು ಹೋದರು. ರಾಜನು ಅವನನ್ನು ನೋಡಿ, " ಸ್ತ್ರೀಗೆ ಪ್ರಿಯವಾದುದು ಯಾವುದು? ಉತ್ತರ ಹೇಳು " ಎಂದನು.

" ತನ್ನ ಗಂಡನ ಮೇಲೆ ಅಧಿಕಾರ ಮಾಡುವುದೇ ಸ್ತ್ರೀಗೆ ತುಂಬಾ ಪ್ರಿಯ" ಎಂದನು ಹಳ್ಳಿಯವನ ಮಗ.

ಅದನ್ನು ಕೇಳಿ ರಾಜನು ಬೆರಗಾಗಿ, " ನಾನು ನಂಬಲಾರೆ " ಎಂದನು.

"ಮಹಾರಾಣಿಯವರು ಒಂದೇ ಸಣ್ಣ ಪ್ರಶ್ನೆಯಿಂದ ತಮ್ಮ ಮೂಲಕ ಎಷ್ಟು ಕೆಲಸ ಮಾಡಿಸಿದರೆಂದು ತಿಳಿದೂ ಕೂಡಾ ನಂಬದಿದ್ದರೆ. ಅದಕ್ಕೆ ಸ್ತ್ರೀ ಮಾಯೆ ಎನ್ನುತ್ತಾರೆ ಪ್ರಭೂ " ಎಂದನು ಹಳ್ಳಿಯವನ ಮಗ.

" ನಿನ್ನ ಪ್ರಶ್ನೆಗೆ ಇವನ ಉತ್ತರವು ಸರಿಯೆ ?" ಎಂದು ಪಕ್ಕದಲ್ಲಿದ್ದ ರಾಣಿಯನ್ನು ಕೇಳಿದನು ರಾಜ.

ಅವಳು ಹೌದೆಂಬಂತೆ ತಲೆ ತಗ್ಗಿಸಿದಳು. ಹಳ್ಳಿಯವನ ಮಗನು ಹೇಳಿದ ಉತ್ತರವು ಸರಿಯೆಂದು ತಿಳಿದ ರಾಜನು, ಅವನಿಗೆ ಎರಡು ಸಾವಿರ ವರಹಗಳನ್ನು ಬಹುಮಾನ ಕೊಟ್ಟು ಕಳುಹಿಸಿದನು.





# ಶ್ರಮಕ್ಕೆತಕ್ಕಫಲ

ರಾಮಗಿರಿ ಎಂಬ ಊರಿನಲ್ಲಿ ಈಶ್ವರಯ್ಯನೆಂಬೊಬ್ಬ ನಿದ್ದನು. ಅವನ ಗುಣವೂ ಸ್ವಭಾವವೂ ಬಹಳ ವಿಚಿತ್ರವೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಆ ರೀತಿಯಾಗಿ ಸುತ್ತುಮುತ್ತಲ ಗ್ರಾಮಗಳಿಗೂ ಅವನ ಹೆಸರು ಹರಡಿತ್ತು.

ಈಶ್ವರಯ್ಯನಿಗೆ ಪಿತ್ರಾರ್ಜಿತವಾಗಿ ಇರುವ ಆಸ್ತಿ ಎಂದರೆ ಒಂದ ಎಕರೆ ಬೆಟ್ಟುಗದ್ದೆಗಳೇ. ಆದರೆ ಅವನು ಯಜಮಾನನಾದ ಮೇಲೆ ಸ್ವಯಂ ಕಷ್ಟ ಪಟ್ಟು ದುಡಿಯುತ್ತ, ಒಂದು ಬದಿಯಲ್ಲಿ ವ್ಯವಸಾಯ ವನ್ನೂ, ಮತ್ತೊಂದು ಬದಿಯಲ್ಲಿ ವ್ಯಾಪಾರವನ್ನೂ ಮಾಡತೊಡಗಿದನು. ಕಾಲವೂ ಕೂಡಿ ಬಂದುದರಿಂದ ಬಹು ಬೇಗದಲ್ಲೇ ಲಕ್ಷಾಧಿಕಾರಿಯಾದನು. ಅವನು ಹಣದ ವಿಷಯದಲ್ಲಿ ಬಹಳ ಹಿಡಿತವಿಟ್ಟುಕೊಂಡಿದ್ದನು.

ಈಶ್ವರಯ್ಯನ ಮಗ ಸಾಂಬನಿಗೆ ಪ್ರಾಯ ಬಂತು. ಪರಮೇಶ್ವರಪುರದ ಜಮೀನ್ದಾರನ ಮಗಳೊಂದಿಗೆ ಅವನಿಗೆ ಮದುವೆ ನಿಶ್ಚಯವಾಯಿತು, ಮದುವೆಯ ಏರ್ಪಾಡು ಜೋರಿನಿಂದ ನಡೆಯತೊಡಗಿತು.

ಅತ್ಯಂತ ವೈಭವದಿಂದ ಸಾಂಬ ಕುಮಾರನ ಮದುವೆ ನಡೆಯಿತು. ಮದುವೆಯ ಕಾರ್ಯಕಲಾಪ ಗಳಲ್ಲಿ ಪಾಲುಗೊಂಡವರೆಲ್ಲರಿಗೂ ಕಾಣಿಕೆಗಳನ್ನೂ ವಸ್ತ್ರಗಳನ್ನೂ ಕೊಟ್ಟು ಸಂತೋಷಪಡಿಸಬೇಕೆಂಬುದು ಈಶ್ವರಯ್ಯನ ಅಭಿಲಾಷೆ. ಯಾರು ಯಾರು ಎಷ್ಟೆಷ್ಟು ಶ್ರಮಪಟ್ಟರೋ ಅದಕ್ಕೆ ತಕ್ಕಂತೆ ಪ್ರತಿಫಲ ಕೊಡಲು ಎಲ್ಲವನ್ನೂ ಸಿದ್ಧಪಡಿಸಿದನು.

ಆ ರೀತಿಯಾಗಿ ಮೊತ್ತ ಮೊದಲು ಕಾಣಿಕೆ ತೆಗೆದುಕೊಳ್ಳಲು ಮದುವೆಯ ವಾದ್ಯಮೇಳದವ ರನ್ನು ಕರೆಯಿಸಿದನು.

ಮೊದಲು ಸನಾಯಿ ವಿದ್ವಾಂಸನು ಕಾಣಿಕೆ ಪಡೆಯಲು ಮುಂದೆ ಬಂದನು, ಅವನನ್ನು ನೋಡಿ ಈಶ್ವರಯ್ಯ, " ನೀನು ಸ್ವಲ್ಪ ಹಾಗೆ ಬದಿಗೆ ನಿಲ್ಲು " ಎಂದು ಬದಿಗೆ ಕಳುಹಿಸಿ, ದೂರದಲ್ಲಿ ನಿಂತಿದ್ದ ಶ್ರುತಿ ಊದಿದವನನ್ನು ಬರುವಂತೆ ಕರೆದನು. ಅವನು ಹತ್ತಿರ ಬಂದಕೂಡಲೇ, "ಆಹ ! ವಾದ್ಯಮೇಳದಲ್ಲಿ ನಿನ್ನ ಹಾಗೆ ಶ್ರಮಪಟ್ಟವರು ಯಾರೂ ಇಲ್ಲ. ಪಾಪ, ಶ್ವಾಸ ಬಿಗಿದುಕೊಂಡು ಅಷ್ಟು ಹೊತ್ತು ಅದು ಹೇಗೆ ಊದಿದಿಯೋ ! ನಿನ್ನ ಶ್ರಮಕ್ಕೆ ಎಷ್ಟು ಕೊಟ್ಟರೂ ಕಡಿಮೆಯೇ !" ಎಂದು ಹೇಳಿ ಅವನಿಗೆ ನೂರು ರೂಪಾಯಿಗಳನ್ನು ಕೊಟ್ಟನು.

ಎ. ಬಿ. ಸುಬ್ರಹ್ಮಣ್ಯ

ಅನಂತರ ಡೋಲು ಬಡಿದವನನ್ನು ಹತ್ತಿರ ಕರೆದು, "ಅಬ್ಬಬ್ಬ! ಮೈಪೂರಾ ಬೆವರಿಳಿಸಿಕೊಂಡು ಬಹಳ ಕಷ್ಟಪಟ್ಟೆಯಪ್ಪ! ಸಂತೋಷವಾಗಿ ತೆಗೆದುಕೋ" ಎಂದು ಹೇಳಿ ಎಪ್ಪತ್ತೈದು ರೂಪಾಯಿಗಳನ್ನು ನೂತನ ವಸ್ತ್ರಗಳೊಂದಿಗೆ ಅವನಿಗೆ ಕೊಟ್ಟನು.

ಅಮೇಲೆ ತಾಳದವನನ್ನು ಕರೆದು "ಒಂದು ನಿಮಿಷ ಕೂಡಾ ವಿರಾಮವಿಲ್ಲದೆ ತಾಳ ಬಾರಿಸಿದಿ. ನಿನ್ನ ಕಷ್ಟಕ್ಕೆ ಇದನ್ನು ತೆಗೆದುಕೋ" ಎಂದು ಹೇಳಿ ಹೊಸ ವಸ್ತ್ರದೊಂದಿಗೆ ಐವತ್ತು ರೂಪಾಯಿ ಕೊಟ್ಟನು.

ಕಟ್ಟಕಡೆಗೆ ಸನಾಯಿ ಬಾರಿಸಿದವನನ್ನು ಅಸಂತೃಪ್ತಿಯಿಂದ ನೋಡುತ್ತ, "ಅಲ್ಲಯ್ಯಾ, ನೀನೂ ಮೇಳದ ಕೆಲಸಕ್ಕೆ ತಾನೇ ಬಂದಿರುವೆ? ಅವರನ್ನೆಲ್ಲ ಕೆಲಸಕ್ಕೆ ಬಿಟ್ಟು ನೀನು ಆಗಾಗ ಸುಮ್ಮನೆ ಕುಳಿತಿರುವುದೆಂದರೇನು? ಐದು ನಿಮಿಷ ಸನಾಯಿ ಬಾರಿಸುತ್ತಿ, ಹತ್ತು ನಿಮಿಷ ಅತ್ತಿತ್ತ ನೋಡುತ್ತಾ ಸುಮ್ಮನಿರುವಿ. ಈ ಲಕ್ಷಣದ ನಿನಗೆ ಕುತ್ತಿಗೆಯಲ್ಲಿ ಬಂಗಾರದ ಗೊಲುಸು, ಬೆರಳುಗಳಿಗೆಲ್ಲಾ ಉಂಗುರವೇ! ನೀನು ಮಾಡಿದುದಕ್ಕೆ ಇದು ಕೂಡಾ ದಂಡವೇ!" ಎನ್ನುತ್ತಾ ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟನು.

ಸನಾಯಿ ವಿದ್ವಾಂಸನು ಆಶ್ಚರ್ಯದಿಂದ ಹಾಗೆಯೇ ಸುಮ್ಮನೆ ನಿಂತು ಬಿಟ್ಟನು.

ಪಕ್ಕದಲ್ಲಿದ್ದು ಇದನ್ನೆಲ್ಲ ನೋಡಿಕೊಂಡಿದ್ದ ಈಶ್ವರಯ್ಯನ ಸಂಬಂಧಿಕನಾದ ಪರಮೇಶ್ವರಪುರದ ಜಮೀನ್ದಾರನು ಸಣ್ಣಗೆ ನಗುತ್ತ, ಈಶ್ವರಯ್ಯನನ್ನು ನೋಡಿ, "ಬಾವಯ್ಯನವರು ಪ್ರತಿಯೊಂದನ್ನೂ ಹಣದ ಲೆಕ್ಕದಲ್ಲೇ ತೂಗುವವರೆಂದು ಕೇಳಿದ್ದು ನಿಜವೇ. ಅದು ಒಳ್ಳೆಯದೇ ಆದರೂ, ಆ ಬೆಲೆ ಕಟ್ಟುವುದರಲ್ಲಿ ಶರೀರ ಶ್ರಮ ಮಾತ್ರ ನೋಡಿದರೆ ತಪ್ಪಾಗುತ್ತದೆಂದು ನನಗೆ ತೋರುತ್ತದೆ. ಹಾಗೆ ನೋಡಿದರೆ ಮದುವೆ ದಿಬ್ಬಣದ ಪಲ್ಲಕಿ ಹೊರುವ ಬೋಯಿಗಳು ಮೊದಲಾದವರಿಗಿಂತಲೂ, ಅಳಿಯ ಏನು ಕಷ್ಟಪಟ್ಟನೆಂದು ಅವನಿಗೆ ಹುಡುಗಿಯೊಂದಿಗೆ ನಗನಟ್ಟು ವರದಕ್ಷಿಣೆ ಮೊದಲಾದ ಸಕಲವಿಧ ಕಾಣಿಕೆಗಳನ್ನು ಕೊಡುವುದು? ಅದು ಕೂಡಾ ತಪ್ಪೆಂದೇ ಆಗುತ್ತದಷ್ಟೆ?" ಎಂದನು.

ಜಮೀನ್ದಾರನ ಈ ಮಾತುಗಳು ಈಶ್ವರಯ್ಯನಿಗೆ ನಾಟಿತು. ಕೂಡಲೇ ತನ್ನನ್ನು ತಾನು ಸಮಾಧಾನಪಡಿಸಿಕೊಂಡು ತನ್ನ ಲೋಪವೇನೆಂದು ತಿಳಿದನು. "ನಾನು ತಮಾಷೆಗೆ ತಲೆಕೆಳಗಾಗಿ ಕೊಡಲು ಪ್ರಾರಂಭಿಸಿದೆನೆಂದುಕೊಳ್ಳಿರಪ್ಪಾ" ಎಂದು ಹೇಳಿ ಸನಾಯಿ ವಿದ್ವಾಂಸನಿಗೆ ನೂರೈವತ್ತು ಕೊಟ್ಟು, ಶಾಲುಹೊದಿಸಿ, ಉಳಿದವರಿಗೂ ತಕ್ಕ ಹಾಗೆ ಸನ್ಮಾನ ಮಾಡಿದನು ಈಶ್ವರಯ್ಯ.






ಕೆಲ ಪುರೋಹಿತರಾದ ವಸಿಷ್ಠರ ಪ್ರೇರಣೆಯಂತೆ ದಶರಥ ಮಹಾರಾಜನು ಪುತ್ರ ಕಾಮೇಷ್ಟಿಯಾಗ ವನ್ನು ಮಾಡುವಾಗ, ಅಗ್ನಿದೇವನು ಪ್ರತ್ಯಕ್ಷನಾಗಿ ಅವನ ಕೈಗೊಂದು ಪಾಯಸದ ಕಲಶವನ್ನು ಕೊಟ್ಟನು. ಪುತ್ರವರಪ್ರಸಾದವಾದ ಆ ಕಲಶವನ್ನು ದಶರಥನು ಆತ್ಮಾನಂದದಿಂದ ಪಡೆದುಕೊಂಡು ಅದರಲ್ಲಿದ್ದ ಪಾಯಸವನ್ನು ಕೌಸಲ್ಯೆಗೂ ಕೈಕೇಯಿಗೂ ಸಮನಾಗಿ ಹಂಚಿ ಕೊಟ್ಟನು.

ಅವನಿಗೆ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಎಂಬ ಮೂವರು ರಾಣಿಯರಿದ್ದರೂ ಪಾಯಸವನ್ನು ಇಬ್ಬರಿಗೇ ಹಂಚಿಕೊಟ್ಟಿದ್ದನು. ಕೌಸಲ್ಯೆ ತನಗೆ ಕೊಟ್ಟ ಪಾಯಸದಿಂದ ಸ್ವಲ್ಪವನ್ನು ಸುಮಿತ್ರೆಗಾಗಿ ಬೇರೊಂದು ಪಾತ್ರಕ್ಕೆ ಸುರಿದಳು. ಹಾಗೆಯೇ ಕೈಕೇಯಿ ಕೂಡಾ ತನಗೆ ಬಂದ ಪಾಯಸದಿಂದ ಸ್ವಲ್ಪ ವನ್ನು ಆ ಪಾತ್ರಕ್ಕೆ ಹಾಕಿದಳು. ಹೀಗೆ ಮೂವರು ರಾಣಿಯರೂ ಭೇದವೇನಿಲ್ಲದಂತೆ ಆ ಪಾಯಸ ವನ್ನು ಸೇವಿಸಿದರು.

ಚೈತ್ರಶುದ್ಧ ನವಮಿಯ ದಿನ ಕೌಸಲ್ಯೆಯ ಹೊಟ್ಟೆ ಯಿಂದ ವಿಷ್ಣು ರಾಮನೆಂಬ ಹೆಸರಿನಿಂದ, ನೀಲ ಮೇಘ ಛಾಯೆಯ ಶರೀರಕಾಂತಿಯಿಂದ ಹುಟ್ಟಿದನು. ಅವನೇ ದಶರಥನ ಹಿರಿಯ ಮಗ.

ಆಮೇಲೆ ಕೈಕೇಯಿಗೆ ಶಂಖ ಪದ್ಮಗಳ ಅಂಶದಿಂದ ಮುತ್ತಿನಂತೆ ಬಿಳೀ ಬಣ್ಣದಿಂದ ಭರತನು ಹುಟ್ಟಿದನು. ಶೇಷನ ಅಂಶದಿಂದ ಬಂಗಾರದ ವರ್ಣದೊಂದಿಗೆ ಲಕ್ಷ್ಮಣನೂ, ಚಕ್ರಗದೆಗಳ ಅಂಶದಿಂದ ಹವಳದ ಕೆಂಬಣ್ಣದೊಂದಿಗೆ ಶತ್ರುಘ್ನನೂ ಸುಮಿತ್ರೆಯ ಹೊಟ್ಟೆಯಿಂದ ಹುಟ್ಟಿದರು. ಹೀಗೆ ದಶರಥನಿಗೆ ಮೂವರು ರಾಣಿಯರಲ್ಲಿ ನಾಲ್ವರು ಮಕ್ಕಳಾದರು.

ಚೈತ್ರಶುದ್ಧ ನವಮಿಯ ಆ ಸುದಿನವು ರಾಮ ನವಮಿ ಎಂದು ಹೆಸರು ಪಡೆದು, ಕೋಸಲ ರಾಜ್ಯ ದೊಳಗೆಲ್ಲಾ ಆನಂದೋತ್ಸವಗಳು ನಡೆಯುತ್ತಿದ್ದುವು. ಅಂತಹ ಮೂರನೇ ಚೈತ್ರವು ಬಂದಿತು. ಅಯೋಧ್ಯಾ ನಗರದಲ್ಲಿ ಚಕ್ರವರ್ತಿಯ ಹಿರಿಯ ಕುಮಾರನ ಜನ್ಮ ದಿನೋತ್ಸವದ ವಿನೋದಗಳೂ, ದಾನಧರ್ಮಗಳೂ

೧. ರಾಮಾವತಾರ



ದೊಡ್ಡ ರೀತಿಯಲ್ಲಿ ನಡೆದುವು. ಹಾಗೆಯೇ ಚೈತ್ರ ಪೌರ್ಣಮಿಯ ದಿನ ರಾಜಭವನದ ಮೇಲ್ಮಾಳಿಗೆಯ ಮೇಲೆ ಹರಡಿದ ಶುಭ್ರವಾದ ಬೆಳುದಿಂಗಳಿನಲ್ಲಿ ದಶರಥನು ರಾಣಿಯರ ಜತೆಯಲ್ಲಿ ನಾಲ್ವರು ಚಿರಂಜೀವಿಗಳೊಂದಿಗೆ ಆನಂದಲೀಲೆಯಲ್ಲಿದ್ದನು. ಮಂತ್ರಿ ಸುಮಂತ್ರನೂ, ರಾಮನನ್ನು ಯಾವಾಗಲೂ ಎತ್ತಿ ಆಡಿಸಿಕೊಂಡಿರುವ ಅಂತರಂಗಿಕನಾದ ರಾಜ ಬಂಧು ಭದ್ರನೂ ಅಲ್ಲಿಯೇ ಇದ್ದರು. ಬಗೆ ಬಗೆಯ ಚಿತ್ರಾನ್ನಗಳೊಂದಿಗೆ ಅವರೆಲ್ಲರಿಗೂ ಬೆಳದಿಂಗಳೂಟ ನಡೆಯಿತು.

ಕೌಸಲ್ಯೆ ರಾಮನನ್ನು ಎತ್ತಿಕೊಂಡು ಚಂದ್ರನನ್ನು ತೋರಿಸುತ್ತಿರಲು, ರಾಮನು ಚಂದ್ರನ ಕಡೆಗೆ ಕೈ ನೀಡುತ್ತ ಅದು ಬೇಕೆಂದು ಒಂದೇ ಹಟ ಶುರು ಮಾಡಿದನು. ಎಷ್ಟು ಲಲ್ಲೆಮಾಡಿ ಮಂಗಾಡಿಸಿದರೂ ಅವನ ಅಳು ನಿಲ್ಲಲಿಲ್ಲ. ಬಾಲರಾಮನ ಅಳುವಿಕೆ ಎಲ್ಲರ ಗಮನವನ್ನೂ ಸೆಳೆಯಿತು.

ಆಗ ಸುಮಂತ್ರನು ಒಂದು ಕನ್ನಡಿಯನ್ನು ತರಿಸಿ ರಾಮನ ಮುಂದಿಟ್ಟು ಅದರಲ್ಲಿಯ ಚಂದ್ರಬಿಂಬವನ್ನು ಶಿಶುರಾಮನಿಗೆ ತೋರಿಸಿದನು. ರಾಮನು ಸಂತೋಷದಿಂದ ನಗುತ್ತ "ಆನು ಲಾಮಾ ಚಂದಾ" ಎಂದು ಮುದ್ದುಮುದ್ದಾಗಿ ತಪ್ಪು ನುಡಿಗಳಿಂದ ಚಪ್ಪಾಳೆ ತಟ್ಟಿದನು. "ಹೌದು, ನೀನು ರಾಮಚಂದ್ರ" ಎಂದು ಎಲ್ಲರೂ ನಗುತ್ತ ಮುದ್ದು ಮುದ್ದಾಗಿ ಹಾಗೆಯೇ ಕರೆಯತೊಡಗಿದರು.

ಆಮೇಲೆ ಭದ್ರನು ರಾಮನನ್ನೆತ್ತಿಕೊಂಡು ಕನ್ನಡಿಯ ಚಂದ್ರನನ್ನು ತೋರಿಸಿ "ಈಗ ನೀನು ಯಾರು ?" ಎಂದನು.

"ಲಾಮ ಬದ್ದಲ !" ಎಂದನು ರಾಮು, ಈ ವಿಧವಾಗಿ ರಾಮಭದ್ರನೆಂಬ ಹೆಸರು ಕೂಡಾ ಅವನಿಗೆ ಬಂತು.

ಆಮೇಲೆ ಲಕ್ಷ್ಮಣ ಭರತ ಶತ್ರುಘ್ನರು ಸಹಾ ಸೇರಿ ಕನ್ನಡಿಯಲ್ಲಿ ಕಾಣಿಸಿದರು. ಮೇಲೆ ತುಂಬಿದ ಚಂದ್ರಬಿಂಬವು ಕೊಡೆಯ ಹಾಗೆ ತೋರಿತು. ಎಲ್ಲರಿಗೂ ಆ ದೃಶ್ಯವು ರಾಮಪಟ್ಟಾಭಿಷೇಕವನ್ನು ಸ್ಫುರಿಸುವಂತೆ ಮಾಡಿತು. ಆಗ ದಶರಥನಿಗೂ, ಮೂವರು ಅಮ್ಮಂದಿರಿಗೂ ಆದ ಸಂತೋಷಕ್ಕೆ ಮೇರೆ ಇರಲಿಲ್ಲ. ಎಲ್ಲರೂ ಬಿಡದೆ ರಾಮನನ್ನೆತ್ತಿ ಮುದ್ದಾಡಿದ್ದೇ ಆಡಿದ್ದು !

ರಾಜಕುಮಾರರು ಬೆಳೆಯುತ್ತಾ ಬರುತ್ತಿದ್ದರು. ಲಕ್ಷ್ಮಣನು ಯಾವಾಗಲೂ ರಾಮನನ್ನು ಅಂಟಿಕೊಂಡೇ ಇರುತ್ತಿದ್ದನು. ಅದರಂತೆ ಭರತಶತ್ರುಘ್ನರಿಬ್ಬರೂ ಜಂಟಿಗಳ ಹಾಗೆ ಒಂದೇ ಜೀವದಂತಿದ್ದರು. ಹೀಗೆ ಇಬ್ಬರಿಬ್ಬರ ಕಟ್ಟಿನೊಂದಿಗೆ ನಾಲ್ವರೂ ಒಗ್ಗಟ್ಟಾಗಿದ್ದರು. ರಾಮನೇ ಅವರೆಲ್ಲರ ನಾಯಕ.

ಅಣ್ಣತಮ್ಮಂದಿರು ನಾಲ್ವರಾದರೂ ಅವರೆಲ್ಲಾ ಒಟ್ಟಿಗೆ ಒಂದು ಪರಿಪೂರ್ಣ ರೂಪದಂತೆ ಕಾಣುತ್ತಿದ್ದರು.



ಕುಲಗುರುವಾದ ವಸಿಷ್ಠರ ಹತ್ತಿರ ರಾಜಕುಮಾರರು ಸಕಲ ವಿದ್ಯೆಗಳನ್ನೂ ಕಲಿತರು. ರಾಮನು ಚಿಕ್ಕ ವಯಸ್ಸಿನಲ್ಲಿಯೇ ದೊಡ್ಡ ದೊಡ್ಡ ಶಾಸ್ತ್ರಗಳನ್ನು ಓದಿಕೊಂಡನು. ಸಕಲ ಶಾಸ್ತ್ರಗಳೂ, ವೇದ, ವೇದಾಂಗಗಳೂ, ಧರ್ಮ ಸೂಕ್ಷ್ಮಗಳೂ, ಯೋಗ ರಹಸ್ಯಗಳೂ, ಪ್ರಪಂಚ ವ್ಯವಹಾರಗಳೂ ಅವರಿಗೆ ಅವಗತವಾದುವು.

ವಸಿಷ್ಠನು ರಾಮನಿಗೆ ಅವನ ವಂಶವೃತ್ತಾಂತವನ್ನು ಹೇಳಲು ತೊಡಗಿ, " ರಾಮಚಂದ್ರಾ, ನಿಮ್ಮ ವಂಶದ ಆದಿಕರ್ತನು ಸೂರ್ಯನು. ಅಂತಲೇ ನೀನು ರವಿರಾಮನೆನಿಸುವಿ. ಇಕ್ಷ್ವಾಕುಕುಲ ತಿಲಕನು ನೀನು. ನಿನ್ನ ಮುತ್ತಾತನಾದ ರಘು ಮಹಾರಾಜನು ಬಹು ದೊಡ್ಡ ಕೀರ್ತಿಗಳಿಸಿದ್ದಾನೆ. ಈ ರಘುವಂಶ ಸುಧಾಂಬುಧಿಯಲ್ಲಿ ನೀನು ಚಂದ್ರನು. ರಘುರಾಮಚಂದ್ರನು. ನಿನ್ನ ಹೆಸರು ಅಜರಾಮರ !" ಎಂದು ಹೇಳಿ ರಾಮನನ್ನು ಆಶೀರ್ವಾದ ಮಾಡಿದನು.

ಹೀಗೆ ಸೂತಪೌರಾಣಿಕನು ಹೇಳಿಕೊಂಡು ಹೋಗುವುದನ್ನು ನೋಡಿ, ನೈಮಿಷಾರಣ್ಯದ ಶೌನಕಾದಿ ಮುನಿಗಳು, " ಅಯ್ಯಾ, ಸೂತ ಮುನೀಂದ್ರಾ, ಸೂರ್ಯವಂಶದ ರಾಜರ ಚರಿತ್ರೆಯನ್ನು ಇನ್ನಷ್ಟು ವಿಪುಲವಾಗಿ ಹೇಳಬೇಕು " ಎಂದು ಕೇಳಿಕೊಂಡನು.

ಸೂತನು ಹೇಳತೊಡಗಿದನು : ಮಹಾ ಕಲ್ಪಾರಂಭದಲ್ಲಿ ವಿವಸ್ವಂತನೆಂಬ ಹೆಸರಿನಿಂದ ಪ್ರಕಾಶಿಸಿದ ಸೂರ್ಯನಿಗೆ ಕುಮಾರನಾಗಿ ವೈವಸ್ವತನು ಜನಿಸಿ ಮನುವಾಗಿ ಪ್ರಸಿದ್ಧಿ ಪಡೆದನು.

ಆ ವೈವಸ್ವತ ಮನುವಿಗೆ ಇಕ್ಷ್ವಾಕು ಮೊದಲಾದ ಹತ್ತು ಮಂದಿ ಕುಮಾರರಾದರು.

ಅವರೆಲ್ಲಾ ದೊಡ್ಡ ದೊಡ್ಡ ರಾಜರಾಗಿ ಧರಣಿಯನ್ನು ಆಳಿದರು. ಅವರ ಸಂತತಿಗಳು ಚೆನ್ನಾಗಿ ಬೆಳೆದು ಸೂರ್ಯವಂಶವು ಶಾಖೋಪಶಾಖೆಗಳಾಗಿ ಧರಣಿಮಂಡಲದೊಳಗೆಲ್ಲಾ ಹರಡಿ ಬಹಳ ವಿಸ್ತರವಾಯಿತು.

ಇಕ್ಷಾಕು ಸಂತತಿಯವರಲ್ಲಿ ದಿಲೀಪನೂ, ರಘುವೂ ಧರ್ಮಪರಾಯಣರಾದ ಬಹು ದೊಡ್ಡ ಚಕ್ರವರ್ತಿಗಳೆಂದು ಹೆಸರು ಪಡೆದರು.

ಒಮ್ಮೆ ದಿಲೀಪ ಮಹಾರಾಜನು ಸಂತಾನ ಪ್ರಾಪ್ತಿಗಾಗಿ, ಕುಲಗುರುವಾದ ವಸಿಷ್ಠನ ಆದೇಶದಂತೆ ಕಾಮಧೇನುವಿನ ಅಂಶವಾದ ನಂದಿನಿ ಎಂಬ ಧೇನುವನ್ನು ಭಕ್ತಿಶ್ರದ್ಧೆಗಳಿಂದ ಆರಾಧಿಸುತ್ತ, ಅದನ್ನು ತಾನೇ ಅರಣ್ಯಕ್ಕೆ ಒಯ್ದು ಹುಲ್ಲುಗಾವಲಿನಲ್ಲಿ ಮೇಯಿಸುತ್ತಿದ್ದನು. ಆ ಧೇನು ಮೇಯುತ್ತಾ ಒಂದು ಗುಹೆಯೊಳಗೆ ಪ್ರವೇಶಮಾಡಿತು. ಆ ಗುಹೆಯೊಳಗಿದ್ದ ಭಯಂಕರವಾದೊಂದು ಸಿಂಹವು ಧೇನುವನ್ನು ಹಿಡಿದುಕೊಂಡಿತು. ಅದನ್ನು ನೋಡಿ ದಿಲೀಪನು ಸಿಂಹವನ್ನು ಕೊಲ್ಲಲು, ಧನುಸ್ಸಿಗೆ ಬಾಣಹೂಡಲು, ಅವನ ಕೈಗಳು ಅಲುಗಿಸಲಾಗದಂತೆ ಸ್ತಂಭನ



ಗೊಂಡುವು. ದಿಲೀಪನು ಆಶ್ಚರ್ಯದಿಂದ ಏನೂ ತೋರದೆ ನಿರ್ವಿಣ್ಣನಾಗಿ ನಿಂತನು.

ಆಗ ಸಿಂಹವು ಅವನೊಂದಿಗೆ "ಓ ರಾಜಾ! ಈ ಆಕಳು ನನಗೆ ದೊರೆತ ಆಹಾರವಾಗಿದೆ. ಹಾಗಿರುವಾಗ ನನ್ನನ್ನು ನೀನೀಗ ಕೊಲ್ಲುವುದು ಅಧರ್ಮವಾದುದರಿಂದಲೇ ನಿನ್ನ ಕೈಗಳು ಮರಗಟ್ಟಿ ಹೋದುವು!" ಎಂದಿತು.

ಆ ಮಾತು ಕೇಳಿ ದಿಲೀಪನು ಇದು ಸಾಮಾನ್ಯ ಸಿಂಹವಲ್ಲವೆಂದು ತಿಳಿದು, "ಹಾಗಾದರೆ ನನ್ನನ್ನು ಆಹಾರವಾಗಿ ತೆಗೆದುಕೊಂಡು ಈ ಧೇನುವನ್ನು ಬಿಟ್ಟುಬಿಡು" ಎಂದು ಪ್ರಾರ್ಥಿಸಿದನು. ಆಗ ಆ ಸಿಂಹವು ಮಾಯವಾಗಿ ಹೋಯಿತು.

ನಂದಿನಿ ಧೇನು ದಿಲೀಪನ ಭಕ್ತಿಗೆ ಸಂತೋಷಪಟ್ಟು, ಆ ದೃಶ್ಯವನ್ನು ತಾನೇ ಕಲ್ಪಿಸಿದೆನೆಂದು ಹೇಳಿ, ಅವನಿಗೆ ಸಂತಾನ ಪ್ರಾಪ್ತಿಯಾಗುವಂತೆ ವರವನ್ನು ಕೊಟ್ಟಿತು.

ಹಾಗೆ ಹುಟ್ಟಿದ ದಿಲೀಪನ ಕುಮಾರನೇ ರಘು ಮಹಾರಾಜ. ರಘು ಕೂಡಾ ಮಹಾದಾನಿಯಾಗಿ ಹೆಸರು ಪಡೆದನು.

ಒಮ್ಮೆ ಅತಿಥಿಯಾಗಿ ಬಂದ ತಪಸ್ವಿಯೊಬ್ಬನ ಮನೋವಾಂಛೆಯನ್ನು ಅರಿತು, ರಘು ಮಹಾರಾಜನು ತನ್ನ ರಾಣಿಯನ್ನು ಆ ತಪಸ್ವಿಯ ಆಶ್ರಮಕ್ಕೆ ಕರೆದೊಯ್ದು ಬಿಟ್ಟು ಬಂದನು. ಆದರೆ ತಪಸ್ವಿ ತನ್ನ ತಪ್ಪನ್ನು ತಿಳಿದುಕೊಂಡು ಪಶ್ಚಾತ್ತಾಪಪಟ್ಟು, ಅವಳಿಗೆ ಸಗೌರವವಾಗಿ ನಮಸ್ಕಾರಮಾಡಿ ರಾಜಭವನಕ್ಕೆ ಕಳುಹಿಸಿದನು.

ದಾನವಾಗಿ ಕೊಟ್ಟವಳನ್ನು ಮತ್ತೆ ಪರಿಗ್ರಹಿಸಿಕೊಳ್ಳಲು ರಘುರಾಜನು ಸಮ್ಮತಿಸಲಿಲ್ಲ. ರಾಣಿ ತನ್ನ ಕುತ್ತಿಗೆ ಕಡಿದು ಕೊಲ್ಲುವಂತೆ ಗಂಡನನ್ನು ಬೇಡಿಕೊಂಡಳು.

ಹೆಂಡತಿಯನ್ನು ಕಡಿಯಲು ರಘು ಮಹಾರಾಜನು ಎತ್ತಿದ ಕತ್ತಿ, ಅವಳ ಕೊರಳಿನ ಮೇಲೆ ಹೂವಿನ ರಾಶಿಯಾಗಿ ಬಿದ್ದಿತು. ಆ ರಾಜ ದಂಪತಿಗಳ ಮೇಲೆ ದೇವತೆಗಳು ಹೂವಿನ ಮಳೆ ಸುರಿಸಿದರು.

ರಘು ಮಹಾರಾಜನು ತನ್ನದೆಂದು ಏನನ್ನೂ ಉಳಿಸಿಕೊಳ್ಳದೆ ಇರುವ ಸಂಪದಗಳನ್ನೆಲ್ಲಾ ದಾನವಾಗಿ ಕೊಟ್ಟು ಮುಗಿಸಿದನು, ಅಷ್ಟಕ್ಕೆ ತೃಪ್ತನಾಗದೆ ಇನ್ನಷ್ಟು ಧನವನ್ನು ತರಲು ಕುಬೇರನ ಬಳಿಗೆ ಹೋದನು.

ರಘು ಅಲಕಾನಗರಿಯನ್ನು ತಲಪದಂತೆ ತಡೆಯಲು ದಾರಿಯಲ್ಲಿ ಯಕ್ಷರು ತಮ್ಮ ಮಾಯೆಗಳನ್ನೆಲ್ಲಾ ಅವನ ಮೇಲೆ ಪ್ರಯೋಗಿಸಿ ವಿಫಲರಾದರು. ಕುಬೇರನು ರಘು ಮಹಾರಾಜನನ್ನು ಸಾದರಪೂರ್ವಕವಾಗಿ ಗೌರವಿಸಿ, ಅಪಾರ ಸಂಪತ್ತುಗಳನ್ನು ಅವನಿಗೆ ಕೊಟ್ಟು ಕಳುಹಿಸಿದನು., ಕೇಳುವವರಿಗೆ ಇಲ್ಲವೆನ್ನದೆ ರಘು ಮಹಾರಾಜನು ಕಡೆತನಕವೂ ದಾನಮಾಡಿಕೊಂಡೇ ಇದ್ದನು.

ರಘುವಿನ ಕುಮಾರನು ಅಜ. ಇವನು ಬಹು ದೊಡ್ಡ ಶೂರ, ಇವನನ್ನು ಭೋಜರಾಜನ ಮಗಳು ಇಂದುಮತಿ ಸ್ವಯಂವರದಲ್ಲಿ ವರಿಸಿಕೊಂಡಳು. ಅಜನು ಇಂದುಮತಿಯೊಂದಿಗೆ ತನ್ನ ಮನೆಗೆ ಹೊರಡುತ್ತಿರುವಾಗ, ಸ್ವಯಂವರಕ್ಕೆ ಬಂದಿದ್ದ ರಾಜರೆಲ್ಲರೂ ಒಂದಾಗಿ ಕೂಡಿ ಅವನ ಮೇಲೆ ಬಿದ್ದರು. ಅಜನು ಅವರೆಲ್ಲರನ್ನೂ ಇದಿರಿಸಿ ಯುದ್ಧ ಮಾಡಿ ಗೆದ್ದು ಎಲ್ಲರನ್ನೂ ಓಡಿಸಿಬಿಟ್ಟನು.

ಅಜನು ಇಂದುಮತಿಯೊಂದಿಗೆ ಉದ್ಯಾನವನದಲ್ಲಿ ವಿಹರಿಸಿಕೊಂಡಿರುವಾಗ, ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ನಾರದನ ವೀಣೆಗೆ ಸುತ್ತಿದ್ದ ದೇವಲೋಕದ ಪುಷ್ಪಮಾಲೆ, ಜಾರಿ ಗಾಳಿಯಲ್ಲಿ ಹಾರುತ್ತಾ ಬಂದು ಇಂದುಮತಿಯ ಕೊರಳಿಗೆ ಬಿತ್ತು. ಕೂಡಲೇ ಇಂದುಮತಿ ಗಾಬರಿಯಿಂದ ಬಿದ್ದು ಸತ್ತುಹೋದಳು.

ಅಜನು ಪ್ರಿಯಸತಿಯ ಆಕಸ್ಮಿಕ ಮರಣಕ್ಕೆ ಪರಿತಪಿಸಿಕೊಂಡಿರುವಾಗ, ನಾರದನು ಬಂದು ಅವನಿಗೆ ಸಮಾಧಾನ ಹೇಳಿ, ಇಂದುಮತಿಯ ಪೂರ್ವ ವೃತ್ತಾಂತವನ್ನು ಹೇಳಿದನು :

ಅದೇನೆಂದರೆ, ಹರಿಣಿ ಎಂಬ ದಿವ್ಯಾಂಗನೆ, ದೊಡ್ಡ ತಪಸ್ಸನ್ನು ಮಾಡುತ್ತಿದ್ದ ತೃಣಬಿಂದುವಿನ ತಪಸ್ಸನ್ನು ಕೆಡಿಸಲು ದೇವೇಂದ್ರನ ಆಜ್ಞೆಯಿಂದ ಬಂದಳು. ಆದರೆ ತೃಣಬಿಂದು ತಪಸ್ವಿಯ ಶಾಪದಿಂದ ಅವಳು ಮಾನವಿಯಾಗಿ ಹುಟ್ಟಬೇಕಾಯಿತು. ಅವಳಿಗೆ ಶಾಪ ವಿಮೋಚನೆಯಾಗುವ ಮಾರ್ಗವನ್ನೂ ತೃಣಬಿಂದು ಸೂಚಿಸಿದ್ದನು.

ಸುರಪುಷ್ಪ ಮಾಲೆ ಅವಳ ಮೇಲೆ ಬಿದ್ದ ಕೂಡಲೇ ಅವಳಿಗೆ ತಾನು ದೇವಕಾಂತೆ ಎಂಬ ಸ್ಫುರಣೆ ಯುಂಟಾಗಿ, ಮಾನವ ಶರೀರವನ್ನು ಬಿಟ್ಟು ದೇವಲೋಕಕ್ಕೆ ಹೋಗುತ್ತಾಳೆ. ಹಾಗೆಯೇ ಆಯಿತು. ಅಂತಹ ಅಜನ ಕುಮಾರನೇ ದಶರಥನು.



ಇಕ್ಷ್ವಾಕು ವಂಶೀಯರಾದ ರಾಜರು ದೇವತೆಗಳಿಗೂ ರಾಕ್ಷಸರಿಗೂ ಯುದ್ಧವು ನಡೆಯುವಾಗ ದೇವತೆಗಳಿಗೆ ಸಹಾಯವಾಗಿ ಹೋಗುವರು. ಹಾಗೆಯೇ ಒಮ್ಮೆ ದಶರಥನು ಇಂದ್ರನಿಗೆ ಸಹಾಯವಾಗಿ ಹೋದನು. ಆಗ ಶಂಬರಾಸುರನೊಂದಿಗೆ ಯುದ್ಧ ಪ್ರಾರಂಭವಾಗಿತ್ತು. ದಶರಥನೊಂದಿಗೆ ಕೈಕೇಯಿ ಕೂಡಾ ಯುದ್ಧರಂಗಕ್ಕೆ ಹೋದಳು.

ಆ ಯುದ್ಧದಲ್ಲಿ ದಶರಥನು ವೀರಾವೇಶದಿಂದ ಕಾದಾಡುವಾಗ, ರಥದ ಚಕ್ರವು ಕಳಚಲಿರುವುದನ್ನು ನೋಡಿ, ಕೈಕೇಯಿ ಅದು ಕಳಚದಂತೆ ಹಿಡಿದುಕೊಂಡು ಕಾಪಾಡಿದಳು. ದಶರಥನು ಸಂತೋಷಪಟ್ಟು ಎರಡು ವರಗಳನ್ನು ಕೇಳುವಂತೆ ಅವಳಿಗೆ ಹೇಳಿದನು. ತನಗೆ ಬೇಕಾದಾಗ ಆ ಎರಡು ವರ ಕೇಳುವೆನೆಂದೂ, ಆಗ ಕೊಡಿರೆಂದೂ ಕೈಕೇಯಿ ಹೇಳಿದಳು.

ಒಂದಾನೊಂದು ದಿನ ದಶರಥನು ಕತ್ತಲೆಯ ರಾತ್ರಿಯಲ್ಲಿ, ಹೊಲಗದ್ದೆಗಳಿಗೆ ಬಂದು ಬೆಳೆಗಳನ್ನು



ನಾಶಮಾಡುವ ಆನೆಗಳನ್ನು ಬೇಟೆಯಾಡಲು ಹೊರಟಿದ್ದನು. ಆ ಕತ್ತಲೆಯಲ್ಲಿ ಮುನಿಬಾಲಕನೊಬ್ಬನು ಕಮಂಡಲುವಿನಲ್ಲಿ ನೀರು ಮುಳುಗಿಸಿಕೊಳ್ಳುವಾಗ ಹೊರಟ ಶಬ್ದವನ್ನು ಆನೆ ನೀರು ಹೀರುವ ಶಬ್ದವೆಂದು ತಿಳಿದು ಬಾಣದಿಂದ ಹೊಡೆದನು. ಬಾಣದೇಟಿನಿಂದ ಸಾಯುವ ಬಾಲಕನ ಕೂಗನ್ನು ಕೇಳಿ ದಶರಥನು ನಿಜವನ್ನು ತಿಳಿದು ಓಡಿಬಂದನು. ಬಾಲಕನು ತಾನು ಯಾರೆಂದು ಹೇಳಿ ಪ್ರಾಣಬಿಟ್ಟನು. ದಶರಥನು ತಾನೇ ಕಮಂಡಲುವನ್ನು ತೆಗೆದುಕೊಂಡು ಕುರುಡರಾದ ಆ ಬಾಲಕನ ತಾಯಿ ತಂದೆಯರ ಬಳಿಗೆ ಹೋಗಿ, ಅವರ ದಾಹ ತೀರಿಸಿ ನಡೆದ ಸಂಗತಿಯನ್ನು ಹೇಳಿದನು.

ಆ ಮುನಿ ದಂಪತಿಗಳು ಪುತ್ರಶೋಕದಿಂದ, "ನೀನೂ ನಮ್ಮ ಹಾಗೆಯೇ ಪುತ್ರನನ್ನು ನೆನೆದುಕೊಂಡೇ ಪ್ರಾಣಬಿಡು" ಎಂದು ದಶರಥನನ್ನು ಶಪಿಸಿ ಪ್ರಾಣಗಳನ್ನು ಬಿಟ್ಟರು.

ಸೂರ್ಯವಂಶದ ರಾಜರಲ್ಲಿ ಶರಣಾಗತ ರಕ್ಷಣೆಗೆ ಕೀರ್ತಿ ಪಡೆದವನು ಶಿಬಿ ಚಕ್ರವರ್ತಿ. ಶಿಬಿಯನ್ನು ಪರೀಕ್ಷಿಸಬೇಕೆಂದುಕೊಂಡು ಇಂದ್ರನು ಪಾರಿವಾಳದ ರೂಪ ಧರಿಸಿದನು. ಅಗ್ನಿ ಹದ್ದಿನ ರೂಪ ತಾಳಿ ಪಾರಿವಾಳವನ್ನು ಓಡಿಸುತ್ತಾ ಹೊರಟನು. ಓಡಿ ಓಡಿ ಪಾರಿವಾಳವು ತೇಕುತ್ತಾ ಶಿಬಿ ರಾಜನ ತೊಡೆಯ ಮೇಲೆ ಎರಗಿತು. ಅದನ್ನು ಹಿಡಿಯಲು ಬಂದ ಹದ್ದನ್ನು ನೋಡಿ ಶಿಬಿ, ಪಾರಿವಾಳದ ಭಾರದಷ್ಟು ಮಾಂಸವನ್ನು ತನ್ನ ತೊಡೆಯಿಂದ ತೆಗೆದುಕೊಳ್ಳುವಂತೆ ಹೇಳಿದನು.

ಶಿಬಿ ತನ್ನ ತೊಡೆಯಿಂದ ಮಾತ್ರವಲ್ಲದೆ ಶರೀರದ ಭಾಗಗಳಿಂದ ಎಷ್ಟು ಮಾಂಸವನ್ನು ಕೊಯಿದು ಕೊಯಿದು ತಕ್ಕಡಿಗೆ ಹಾಕಿದರೂ, ಪಾರಿವಾಳದ ಭಾರಕ್ಕೆ ಸರಿಹೋಗಲಿಲ್ಲ. ಕಡೆಗೆ ಶಿಬಿ ತನ್ನನ್ನು ಪೂರ್ತಿಯಾಗಿ ತೆಗೆದುಕೊಳ್ಳುವಂತೆ ಹೇಳಿ ತಕ್ಕಡಿಯಲ್ಲಿ ಕುಳಿತುಬಿಟ್ಟನು.

ಆಗ ಇಂದ್ರನೂ ಅಗ್ನಿಯೂ ನಿಜರೂಪದಲ್ಲಿ ಪ್ರತ್ಯಕ್ಷರಾಗಿ, ಶಿಬಿಗೆ ಅನೇಕ ವರಗಳನ್ನು ಕೊಟ್ಟು ಮೆಚ್ಚಿ ಆಶೀರ್ವದಿಸಿ ಹೊರಟು ಹೋದರು.

ವಸಿಷ್ಠನೊಂದಿಗೆ ಸ್ಪರ್ಧೆಗೆ ಬಿದ್ದು, ದೊಡ್ಡ ತಪೋಬಲದಿಂದ ವಸಿಷ್ಠನಿಗೆ ಸಮಾನನೆಂಬಂತೆ ಗುರುತಿಸಲ್ಪಡುವ ಮಹರ್ಷಿಯಾಗಿ, ಪ್ರಸಿದ್ಧನಾದ ವಿಶ್ವಾಮಿತ್ರನು ಕೂಡಾ ಸೂರ್ಯವಂಶದವನಾದ ರಾಜನೇ!

ಅದೇ ಸೂರ್ಯವಂಶದ ಇಕ್ಷ್ವಾಕುಗಳಿಗೆ ಸೇರಿದವನಾದ ಅಂಬರೀಷನು ದೊಡ್ಡ ರಾಜರ್ಷಿಯೂ, ಪರಮ ವಿಷ್ಣುಭಕ್ತನೂ ಆಗಿರುವ ರಾಜ.

ಅಂಬರೀಷನಿಗೆ ಲಕ್ಷ್ಮಿ ತನ್ನ ಅಂಶದಿಂದ ಮಗಳಾಗಿ ಹುಟ್ಟಿದ್ದಳು. ಅವಳ ಹೆಸರು ಶ್ರೀಮತಿ. ಇವಳು ಚಿಕ್ಕತನದಿಂದಲೇ ವಿಷ್ಣುವನ್ನು ತನ್ನ ಗಂಡನೆಂದು ಭಾವಿಸಿ ಆರಾಧಿಸಿಕೊಂಡು ಬಂದಳು. ಅವಳ ಸೌಂದರ್ಯವನ್ನು ಕುರಿತು ಮೂರು ಲೋಕ

ಗಳಲ್ಲಿಯೂ ಅತಿಶಯವಾಗಿ ಹೇಳಿಕೊಳ್ಳುತ್ತಿದ್ದರು. ಒಮ್ಮೆ ನಾರದನೂ, ಪರ್ವತನೂ ಸಂಧಿಸಿಕೊಂಡು ಮಾತಾಡುತ್ತ ವಾದ ವಿವಾದಕ್ಕೆ ತೊಡಗಿದರು. ನಾರದನು ತಾನು ದೊಡ್ಡ ಮಾಯಾತೀತನೆಂಬ ಅಹಂಕಾರದಿಂದ ಪ್ರಗಲ್ಭವಾಡುತ್ತ, ಇಬ್ಬರೂ ತ್ರಿಲೋಕ ಸಂಚಾರಕ್ಕೆ ಹೊರಟರು.

ಅವರಿಬ್ಬರೂ ಅಂಬರೀಷನ ಅರಮನೆಗೆ ಬಂದರು. ಅಂಬರೀಷನು ಅವರನ್ನು ಪೂಜಿಸಿ, ಮಗಳು ಶ್ರೀಮತಿಯನ್ನು ಕರೆದು ನಮಸ್ಕಾರ ಮಾಡಿಸಿ, ಅವಳನ್ನು ಆಶೀರ್ವದಿಸುವಂತೆ ಕೇಳಿಕೊಂಡನು.

ವಿಷ್ಣುವಿನ ಮಾಯೆಯ ಪ್ರಭಾವವು ನಾರದ ಪರ್ವತರನ್ನು ಆವಹಿಸಿತು. ಶ್ರೀಮತಿಯನ್ನು ನೋಡಿ ಮೈಮರೆತು ಅವಳನ್ನು ತನಗೆ ಕೊಟ್ಟು ವಿವಾಹ ಮಾಡುವಂತೆ ಇಬ್ಬರೂ ಅಂಬರೀಷನನ್ನು ಕೇಳಿದರು. ಶ್ರೀಮತಿ ನನಗೆ ತನಗೆ ಎಂದು ಇಬ್ಬರೂ ವಾದ ಮಾಡತೊಡಗಿದರು. ಕೂಡಲೇ ಮದುವೆಗೆ ಏರ್ಪಾಡು ಮಾಡುವಂತೆ ಅಂಬರೀಷನನ್ನು ಒತ್ತಾಯಿಸ ತೊಡಗಿದರು.

ಅಂಬರೀಷನು ಮುನಿಗಳ ಆ ರೀತಿಯನ್ನು ನೋಡಿ ಏನೂ ತೋರದೆ ದಿಗ್ಭ್ರಾಂತನಾದನು. ಆಗ ಶ್ರೀಮತಿ ತನಗೆ ಸ್ವಯಂವರವನ್ನು ಏರ್ಪಡಿಸುವಂತೆ ತಂದೆಯೊಡನೆ ಹೇಳಿದಳು.

ಅಂಬರೀಷನು ನಾರದ ಪರ್ವತರೊಂದಿಗೆ "ನೀವಿಬ್ಬರೂ ಮಹರ್ಷಿಶ್ರೇಷ್ಠರು. ನಾನು ನನ್ನ ಮಗಳಿಗೆ ಸ್ವಯಂವರವನ್ನು ಏರ್ಪಡಿಸುತ್ತೇನೆ. ನನ್ನ ಮಗಳ ಇಷ್ಟದಂತೆ ಮದುವೆಯಾಗುತ್ತದೆ. ಆ ಸ್ವಯಂವರಕ್ಕೆ ನೀವಿಬ್ಬರೂ ಸಹ ಬರಬೇಕೆಂದು ಪ್ರಾರ್ಥನೆ" ಎಂದನು ಕೈಮುಗಿದು.

ಮುನಿಗಳಿಬ್ಬರೂ ಬಾಡಿದ ಮೋರೆಯಿಂದ ಹೊರಟುಹೋದರು. ಶ್ರೀಮತಿಯನ್ನು ಹೇಗಾದರೂ ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ನಾರದನಿಗೆ ಊಹನೆಗಳ ಸರಮಾಲೆ, ಉಪಾಯಗಳ ಮೇಲೆ ಉಪಾಯ. ಶ್ರೀಮತಿ ನಾರದನನ್ನು ವರಿಸದಿದ್ದರೆ ಸಾಕು, ಎಂದು ಪರ್ವತನಿಗೂ ದೀರ್ಘಾಲೋಚನೆ.

ನಾರದನು ವಿಷ್ಣುವಿನ ಬಳಿಗೆ ಹೋಗಿ, ಮಣಿ ಕಿರೀಟ ಕೌಸ್ತುಭಹಾರ, ವೈಜಯಂತಿಮಾಲೆ ಮೊದಲಾದ ವಿಷ್ಣುಭೂಷಣಗಳನ್ನು ತನಗೆ ಕೊಡುವಂತೆ ಕೇಳಿದನು. ವಿಷ್ಣು ತನ್ನ ರೂಪವನ್ನು ಹಾಗೆಯೇ ನಾರದನಿಗೆ ಕೊಟ್ಟನು.

ನಾರದನು ಹೋದ ಮೇಲೆ ಪರ್ವತನು ಬಂದು ವಿಷ್ಣುವನ್ನು ಸ್ತುತಿಸಿ, ಸ್ವಯಂವರದಲ್ಲಿ ನಾರದನ ಮುಖವು ಕೋತಿಯ ಹಾಗೆ ಕಾಣುವಂತೆ ಬದಲಾಯಿಸಬೇಕೆಂದು ಕೇಳಿಕೊಂಡನು. ಹಾಗೆಯೇ ಆಗಲೆಂದನು ವಿಷ್ಣು.





# ಹೆಂಡತಿಯ ಹೊಣೆ

**ಒಂ**ದು ಊರಿನಲ್ಲಿ ಅಹಲ್ಯಾ ಶೇಷಗಿರಿ ಎಂಬ ಗಂಡಹೆಂಡಿರಿದ್ದರು. ಗಂಡನಿಗೆ ನಗರಧಲ್ಲಿ ಕೆಲಸ. ಮನೆಗೆ ಬರುವಾಗ ರಾತ್ರಿ ಬಹಳ ಹೊತ್ತಾಗುತ್ತಿತ್ತು. ಒಂದೊಂದು ದಿನ ಬಾರದೆ ಆಲ್ಲಿಯೇ ಉಳಿದಿರುವುದೂ ಉಂಟು.

ಒಂದು ದಿನ ಸಾಯಂಕಾಲ ಅಹಲ್ಯೆಯ ಅಡಿಗೆ ಕೆಲಸ ಮುಗಿಸಿಯಾಗಲು, ಬಾಗಿಲು ತಟ್ಟಿದ ಸದ್ದಾಯಿತು. ಗಂಡ ಶೇಷಗಿರಿ ಬಂದನೆಂದುಕೊಂಡು ಅಹಲ್ಯೆ ಬಾಗಿಲು ತೆರೆದರೆ, ಬಂದವಳು ಹಿಂದಿನ ಮನೆಯಲ್ಲಿರುವ ತಾಯಾರಮ್ಮ.

"ಮತ್ತೇನಿಲ್ಲ ಅಹಲ್ಯಮ್ಮಾ. ರಾತ್ರಿಯ ಅಡಿಗೆ ಕೆಲಸ ಮುಗೀತು. ಏನೂ ತೋರದೆ ಹೊತ್ತು ಕಳೆಯುವಾ ಅಂತ ಹೀಗೆ ಬಂದೆ." ಎಂದಳು ತಾಯಾರಮ್ಮ.

ಅಹಲ್ಯೆಯ ಗಂಡ ತಾನು ಬರುವಾಗ ಒಂದೆರಡು ದಿನ ಆಗಬಹುದೆಂದು ಹೇಳಿದ್ದನು. ಅಂತಲೇ ಬೇಸರದಲ್ಲಿದ್ದ ಅವಳಿಗೆ ತಾಯಾರಮ್ಮನ ಬರುವಿಕೆಯಿಂದ ಆನಂದವಾಯಿತು. ತಾಯಾರಮ್ಮ ಬಾಯಿ ತುಂಬ ಮಾತಾಡುವವಳು.

ಹೆಂಗುಸರಿಬ್ಬರೂ ನಡುಗೋಣೆಯಲ್ಲಿ ಚಾಪೆ ಬಿಡಿಸಿ ಕುಳಿತುಕೊಂಡು ಅವರಿವರ ಸಮಾಚಾರಗಳನ್ನು ಮಾತಾಡಲು ತೊಡಗಿದರು. ಕತ್ತಲೆಯಾಗುತ್ತಿರಲು ಅಹಲ್ಯೆ ದೀಪ ಬೆಳಗಿಸಿಟ್ಟಳು. ಆಗ ತಾಯಾರಮ್ಮ ತನ್ನ ಕೊರಳಿನಿಂದ ಒಂದು ಚಿನ್ನದ ಸರವನ್ನು ತೆಗೆದು ಅಹಲ್ಯೆಯ ಕೈಗೆ ಕೊಟ್ಟಳು.

"ನೋಡು ಅಹಲ್ಯಾ, ಇದನ್ನು ನನ್ನವರು ನಗರದಲ್ಲಿ ಮಾಡಿಸಿ ತಂದಿದ್ದಾರೆ. ಹೇಗಿದೆ ?" ಎಂದು ಕುತೂಹಲದಿಂದ ಕೇಳಿದಳು ತಾಯಾರಮ್ಮ.

ಆ ಸರದಲ್ಲಿ ಚಿನ್ನದ ಮಣಿಗಳೊಂದಿಗೆ ಹೊಂದಿಸಿರುವ ಕೆಂಪು ಹರಳುಗಳು ದೀಪದ ಕಾಂತಿಯಲ್ಲಿ ಫಳಫಳ ಹೊಳೆಯುತ್ತಿದ್ದುವು. ಅಹಲ್ಯೆ ಅದನ್ನು ಹಾಗೆ ಹೀಗೆ ತಿರುಗಿಸಿ ನೋಡಿ, "ಚೆನ್ನಾಗಿದೆ. ಹೊಸ ನಮೂನೆಯಲ್ಲಿ ಚೆಂದಾಗಿ ಕೈಸುತ್ತದೆ" ಎಂದು ಮೆಚ್ಚಿ ನುಡಿದಳು.

ಸ್ವಲ್ಪ ತಡೆದು ತಾಯಾರಮ್ಮ ಅದನ್ನು ಅವಳ ಕೈಯಿಂದ ತೆಗೆದುಕೊಳ್ಳಲು ನೋಡಿದಾಗ, ಅಹಲ್ಯೆ, "ನನ್ನವರು ನಗರದಲ್ಲಿ ಏನೋ ಒಂದು ಹೊಸ ಕೆಲಸಕ್ಕೆ ಪ್ರಾರಂಭಿಸಿದ್ದಾರಂತೆ. ಅದು ಜಯ ಆಗಿ

**ಎಂ. ಕೆ. ಈಶ್ವರರಾವ್**



ಬಿಟ್ಟರೆ ನನಗೆ ಚಿನ್ನದ ಬಳೆ ಮಾಡಿಸುವುದಾಗಿ ಹೇಳಿದ್ದಾರೆ. ಈ ರಾತ್ರಿ ಮನೆಗೆ ಬಂದಾರು. ಬಳೆಗಳ ಬದಲಾಗಿ ಇಂತಹ ಸರವನ್ನೇ ಮಾಡಿಸಬೇಕೆಂದು ಹೇಳುತ್ತೇನೆ. ಈಗ ಇದು ನನ್ನ ಹತ್ತಿರ ಇರಲಿ' ಬೆಳಿಗ್ಗೆ ಕೊಡುತ್ತೇನೆ" ಎಂದಳು.

ತಾಯಾರಮ್ಮ ಹಾಗೇ ಆಗಲೆಂದು ಹೇಳಿ ತನ್ನ ಮನೆಗೆ ಹೊರಟು ಹೋದಳು. ಅಹಲ್ಯೆ ಆ ಸರವನ್ನು ಪೆಟ್ಟಿಗೆಯೊಳಗಿಟ್ಟು, ಗಂಡನಿಗೋಸ್ಕರ ಬಹಳ ಹೊತ್ತು ಕಾದಳು. ಬೇಸರದಿಂದ ತಾನೊಬ್ಬಳೇ ಊಟಮಾಡಿ, ಬಾಗಿಲುಗಳನ್ನೆಲ್ಲ ಮುಚ್ಚಿ ಮಲಗಿಕೊಂಡಳು.

ಬೆಳಗಾದ ಕೂಡಲೇ ನಿದ್ದೆಯಿಂದ ಎದ್ದ ಅಹಲ್ಯೆ, ಮನೆಯ ಹಿಂದಿನ ಬಾಗಿಲು ಒಳ ಅಗಳಿ ತೆರೆದಿರುವುದನ್ನು ನೋಡಿ ಗಾಬರಿಬಿದ್ದಳು. ಕೋಣೆಯೊಳಗೆ ಓಡಿ ಬಂದು ನೋಡಿದಾಗ, ಪೆಟ್ಟಿಗೆಯಲ್ಲಿದ್ದ ಬಟ್ಟೆಗಳೆಲ್ಲ ಕೆಳಗೆ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಪೆಟ್ಟಿಗೆಯೊಳಗೆ ಇರಬೇಕಾಗಿದ್ದ ಅವಳ ಚಿನ್ನದ ಬೆಂಡೋಲೆಗಳೂ, ನೂರು ರೂಪಾಯಿಗಳೂ, ತಾಯಾರಮ್ಮ ಕೊಟ್ಟ ಚಿನ್ನದ ಸರವೂ ಇರಲಿಲ್ಲ. ಕಳ್ಳ ಉಪಾಯದಿಂದ ಹೊರಗಿನಿಂದಲೇ ಅಗಳಿ ತೆರೆದು ಒಳಗೆ ಪ್ರವೇಶಿಸಿದ್ದಾನೆ. ಒಡಕಾದ ಹಳೆಯ ಬಾಗಿಲು ಅವನಿಗೆ ಅನುಕೂಲವಾಗಿತ್ತು!

ಅಹಲ್ಯೆ ನೆರೆಹೊರೆಯವರನ್ನು ಕರೆದು ನಡೆದ ಸಂಗತಿಯನ್ನೆಲ್ಲಾ ಹೇಳಿದಳು. ಎಲ್ಲರೂ ಅವಳ ಮೇಲೆ ಸಹಾನುಭೂತಿ ತೋರಿಸಿದರೇ ಹೊರತು ಮತ್ತೇನು ಮಾಡಲೂ ಸಾಧ್ಯವಿರಲಿಲ್ಲ. ತಾಯಾರಮ್ಮ ಅಹಲ್ಯೆಯನ್ನು ತುಸು ದೂರ ಕರೆದುಕೊಂಡು ಹೋಗಿ, "ನನ್ನ ಚಿನ್ನದ ಸರ ಭದ್ರವಾಗಿದೆಯಾ ? " ಎಂದು ಕೇಳಿದಳು.

ಅಹಲ್ಯೆ ಕಣ್ಣೀರು ಸುರಿಸುತ್ತ, "ಅದೂ ಹೋಯಿತಲ್ಲಮ್ಮಾ! ಅವನ ಮನೆ ಹಾಳಾಗಿ ಹೋಗ!" ಎಂದು ಬಿಕ್ಕಿದಳು.

"ಕೆಟ್ಟೆನಲ್ಲಮ್ಮಾ! ಅದನ್ನು ನಿನಗೆ ಕೊಟ್ಟು, ಹೀಗೆ ಹೋಯಿತೆಂದು ತಿಳಿದುಬಿಟ್ಟರೆ, ನನ್ನನ್ನು ಹೊಡೆದು ಕೊಲ್ಲುತ್ತಾರಲ್ಲ!" ಎಂದು ತಾಯಾರಮ್ಮ ತಲೆ ಬಡೆದುಕೊಂಡಳು,

"ತಾಯಾರಮ್ಮ, ಸ್ವಲ್ಪ ತಾಳಿಕೊಳ್ಳೀಮ್ಮ. ನನ್ನವರು ಬಂದ ಮೇಲೆ ನಿಮ್ಮ ವಿಷಯ ಸರಿಯಾಗುವ ಹಾಗೆ ಮಾಡಿಸುತ್ತೇನೆ. ಸದ್ಯ ನಿಮ್ಮವರ ಹತ್ರ ಹೇಳಬೇಡಿ" ಎಂದಳು ಅಹಲ್ಯೆ.

"ಇನ್ನೆರಡು ದಿನಗಳಲ್ಲಿ ಅವರ ತಂಗೀಗೆ ಮದುವೆ. ಆ ದಿನಕ್ಕಂತೂ ಚಿನ್ನದ ಸರ ಹಾಕ್ಕೊಳ್ಳಬೇಕು. ಎರಡು ಸಾವಿರ ಬೆಲೆಯ ಸರವಮ್ಮಾ ಅದು!" ಎಂದು ಹೇಳಿಕೊಂಡು ತಾಯಾರಮ್ಮ ಹೋದಳು.

ಅನಂತರ ಸ್ವಲ್ಪ ಹೊತ್ತಿಗೆ ಅಹಲ್ಯೆಯ ಗಂಡ ಶೇಷಗಿರಿ ನಗರದಿಂದ ಮನೆಗೆ ಬಂದು, "ಏನಿದೆಲ್ಲಾ ಗಲಾಟೆ ? ಏನಾಯಿತು ? " ಎಂದು ಹುಬ್ಬುಗಂಟಿಕ್ಕಿ ಕೇಳಿದನು.



ಅಹಲ್ಯೆ ಅವನಿಗೆ ತಾಯಾರಮ್ಮನ ಚಿನ್ನದ ಸರದ ಹೊರತು ರಾತ್ರಿ ಕಳ್ಳ ಬಂದು, ತನ್ನ ಬೆಂಡೋಲೆ ಮತ್ತು ನೂರು ರೂಪಾಯಿ ಕೂಡಾ ಎತ್ತಿಕೊಂಡು ಹೋದ ಸಂಗತಿಯನ್ನು ಹೇಳಿದಳು.

"ಎಂಥಾ ಕೆಲಸವಾಯಿತು! ಅಂಥಾ ಮೊದ್ದು ನಿದ್ದೆಯೋ ನಿನಗೆ! ಥೀ!" ಎಂದನು ಶೇಷಗಿರಿ ಕೋಪದಿಂದ.

ಆ ಮಾತು ಕೇಳಿ ಅಹಲ್ಯೆಗೂ ಕೋಪ ಬಂತು. "ನೀವು ಮಾತ್ರ ಏನಂತೆ? ಆಗಾಗ ರಾತ್ರಿಯಲ್ಲಿ ಮನೆಯಲಿಲ್ಲದಿರುವುದನ್ನು ಕಳ್ಳ ಕಂಡು ಹಿಡಿದಿದ್ದಾನೆ. ಗಂಡಸಾದವರು ಸಮಯಕ್ಕೆ ಸರಿಯಾಗಿ ಮನೆಗೆ ಬಾರದಿದ್ದರೆ ಹೀಗೇ ಆಗುತ್ತೆ. ಕಳ್ಳ ಶಬ್ದ ಮಾಡಿ ಕೊಂಡು ಕದಿಯೋದು ಎಲ್ಲಾದರೂ ಉಂಟೆ?" ಎಂದಳು.

ಶೇಷಗಿರಿ ಮತ್ತೆ ಹೆಂಡತಿಯ ಮೇಲೆ ಕೋಪಿಸಿ ಏನೂ ಹೇಳಲಿಲ್ಲ. ಆ ದಿನ ಸಾಯಂಕಾಲದ ಹೊತ್ತಿ ನಲ್ಲಿ ಅಹಲ್ಯೆ ಗಂಡನೊಂದಿಗೆ ಮೆಲ್ಲನೆ ತಾಯಾರಮ್ಮನ ಚಿನ್ನದ ಸರವನ್ನು ಕೂಡಾ ಕಳ್ಳನು ಕದ್ದೊಯ್ದ ಸಂಗತಿಯನ್ನು ಹೇಳಿ, "ಎರಡು ದಿನಗಳೊಳಗೆ ತಾಯಾರಮ್ಮನಿಗೆ ಅಂತಹ ಸರವನ್ನೇ ಮಾಡಿಸಿ ಕೊಡ ಬೇಕಾಗಿದೆ. ಇಲ್ಲದಿದ್ದರೆ ನಮ್ಮ ಮರ್ಯಾದೆ ಉಳಿಯದು" ಎಂದಳು.

"ಹೌದೇನು? ತಾಯಾರಮ್ಮನ ಸರತಾನೇ? ಅದು ಅಸಲು ಚಿನ್ನದ ಸರವಾಗಿರಲಿಕ್ಕಿಲ್ಲ. ಅವಳ ಗಂಡ ಮಹಾ ಜಿಪುಣ. ಅವನ ಹೆಂಡತಿಗೆ ಎರಡು ಸಾವಿರದಷ್ಟು ಬೆಲೆಯ ಸರಮಾಡಿಸಿದನೆಂದರೆ ನಾನು ನಂಬಲಾರೆ. ಅದು ಚಿನ್ನದ ಲೇಪದ ಸರವೇ ಇರಬೇಕು. ಅಂತಹ ನಗಗಳು ನಗರದಲ್ಲಿ ಬೇಕಾ ದಷ್ಟಿವೆ. ಹತ್ತು ರೂಪಾಯಿಗೆ ಅಂಥಾದ್ದೇ ಸರ ತರುತ್ತೇನೆ." ಎಂದು ಹೇಳಿ ಆ ಚಿನ್ನದ ಸರದ ವಿವರಗಳನ್ನು ತಿಳಿದು ಶೇಷಗಿರಿ ನಗರಕ್ಕೆ ಹೊರಟನು.

ಸರಕ್ಕೆ ಪ್ರತಿಯಾಗಿ ಸರ ಬಂದು ಬಿಟ್ಟರೆ, ತಾಯಾರಮ್ಮನ ಗಂಡನಿಗೆ ಸಂಗತಿ ಗೊತ್ತಾಗದಂತೆ, ತಾಯಾರಮ್ಮನ ಕೈ ಕಾಲಿಗೆ ಬಿದ್ದಾದರೂ ಬೇಡಿಕೊಳ್ಳ ಬಹುದೆಂದು, ಅಹಲ್ಯೆ ಸ್ವಲ್ಪ ಸಮಾಧಾನ ತಾಳಿದಳು.

ಆ ದಿನ ಸಾಯಂಕಾಲ ಶೇಷಗಿರಿ ಕೆಂಪು ಕಲ್ಲಿನ ಚಿನ್ನದ ಸರದೊಂದಿಗೆ ಮನೆಗೆ ಬಂದನು. ಅದು ನಕಲಿ ಸರದಂತೆ ಕಾಣಲೇ ಇಲ್ಲ. ಅಪ್ಪಟ ಚಿನ್ನದ ಸರದಂತೆಯೇ ಇತ್ತು. ಅದನ್ನು ನೋಡಿ ಅಹಲ್ಯೆಗೆ ತಲೆಯ ಮೇಲಿನ ದೊಡ್ಡ ಹೊರೆಯನ್ನು ಕೆಳಗಿಳಿಸಿ ದಷ್ಟು ಸಂತೋಷವಾಯಿತು. ಅವಳು ಆ ಸರವನ್ನು ತೆಗೆದುಕೊಂಡು ಕೂಡಲೇ ತಾಯಾರಮ್ಮನ ಮನೆಗೆ ಹೋದಳು.

ತಾಯಾರಮ್ಮ ಆ ಸರವನ್ನು ನೋಡಿದ ಕೂಡಲೇ "ಸಿಕ್ಕಿತೆ? ಎಲ! ಇದು ನನ್ನದೇ ಸರ. ಹೋದ ಸೊತ್ತು, ದೊರಕುವುದೆಂದರೆ ಹೋದ ಪ್ರಾಣ ತಿರುಗಿ ಬಂದ ಹಾಗೆ ಅಪೂರ್ವ ಘಟನೆ!" ಎಂದಳು



ಅಹಲ್ಯೆ ಸಣ್ಣಗೆ ನಗುತ್ತ, ಇದು ನಿಜಕ್ಕೂ ನಿಮ್ಮ ಚಿನ್ನದಸರ ಅಲ್ಲಮ್ಮಾ. ನಕಲೀಸರ. ನಗರದಿಂದ ನನ್ನವರು ಹತ್ತು ರೂಪಾಯಿಗೆ ತಂದರು. ಇದರಿಂದ ಪ್ರಸ್ತುತಕ್ಕೆ ನಿಮ್ಮವರಿಗೆ ನಡೆದ ಸಂಗತಿ ಗೊತ್ತಾಗದಂತೆ, ನೀವು ಮದುವೆಗೆ ಸಹಾ ಹೋಗಿ ಬರಬಹುದು. ಆಮೇಲೆ ಮೆಲ್ಲನೆ ನನ್ನವರಿಗೆ ಹೇಳಿ ಅಸಲು ಸರ ಮಾಡಿಸಿ ಕೊಡುತ್ತೇನೆ. ನನ್ನ ಮಾತು ನಂಬಿರಿ" ಎಂದಳು.

ತಯಾರಮ್ಮ ಆ ಸರವನ್ನು ಕೊರಳಿಗೆ ಹಾಕಿಕೊಂಡು, "ಇನ್ನು ಮಾಡಿಸೋದೇ ಬೇಡ. ಇದೇ ನನ್ನ ಕೆಂಪು ಕಲ್ಲಿನ ಚಿನ್ನದ ಸರ. ನಿನಗೆ ಇನ್ನೂ ಅಸಲಿಗೂ ನಕಲಿಗೂ ಇರುವ ವ್ಯತ್ಯಾಸ ಗೊತ್ತಾಗಿಲ್ಲ. ನಿನ್ನ ಗಂಡನ ಅಸಲು ರೂಪ ನಿನಗೆ ತಿಳಿಯದು. ನಡೆದ ಸಂಗತಿಯೇ ಬೇರೆ" ಎಂದಳು.

ತಾಯಾರಮ್ಮನ ಮಾತು ಅರ್ಥವಾಗದೆ ಅಹಲ್ಯೆ ಅವಳ ಮುಖವನ್ನು ಪಿಳಿಪಿಳಿ ನೋಡಿದಳು. ಅದೇನು ಹೊಸ ವಿಷಯವಿರಬಹುದು? ತಾಯಾರಮ್ಮ ನಡೆದ ಸಂಗತಿಯನ್ನು ಕುರಿತು ಹೇಳ ತೊಡಗಿದಳು:

ಮಧ್ಯರಾತ್ರಿಯ ಹೊತ್ತಿನಲ್ಲಿ ಹೊರಗೆ ಏನೋ ಶಬ್ದವಾದುದನ್ನು ಕೇಳಿ, ತಾಯಾರಮ್ಮ ಕಿಟಕಿಯಿಂದ ಅಹಲ್ಯೆಯ ಮನೆಯ ಹಿಂದಿನ ಭಾಗವನ್ನು ನೋಡಿದಳು. ಅಲ್ಲಿ ಶೇಷಗಿರಿ ತಡಕಾಡುತ್ತಿರುವುದನ್ನು ನೋಡಿ ಆಶ್ಚರ್ಯಪಟ್ಟಳು. ಅವನ ಮನೆಯ ಹಿಂದಿನ ಬಾಗಿಲ ಹತ್ತಿರ ಅವನಿಗೇನು ಕೆಲಸ? ಬೆಳಗಾದ ಮೇಲೆ ತನ್ನ ಮನೆಯಲ್ಲಿ ಕಳವಾಗಿ ಹೋದ ಸಂಗತಿಯನ್ನು ಅಹಲ್ಯೆ ಹೇಳಿಕೊಳ್ಳುವಾಗ ಅದೇನೆಂದು ಗೊತ್ತಾಯಿತು. ಕಳ್ಳನು ಯಾರೆಂಬುದೂ ತಾಯಾರಮ್ಮನಿಗೆ ತಿಳಿಯಿತು.

ನಗರದಲ್ಲಿ ಶೇಷಗಿರಿಗೆ ಜೂಜಾಡಿ ಹೊತ್ತನ್ನೂ, ಸೊತ್ತನ್ನೂ ಕಳೆದುಕೊಳ್ಳುವ ಚಟವಿರುವುದೆಂದು ತಾಯಾರಮ್ಮನಿಗೆ ಮೊದಲೇ ಗೊತ್ತಿತ್ತು. ಶೇಷಗಿರಿ ನಗರದಲ್ಲಿ ಜೂಜಾಡುವುದನ್ನು ತಾಯಾರಮ್ಮನ ಗಂಡನು ಅನೇಕ ಬಾರಿ ನೋಡಿದ್ದ. ತನ್ನ ಗಂಡನು ತಂದ ಚಿನ್ನದ ಸರವು ನಕಲಿಯದೆಂದು ಅವಳಿಗೆ ತಿಳಿದಿರಲಿಲ್ಲ. ಅವಳಿಗೆ ಬಂಗಾರದ ನಾಣ್ಯತೆ ತಿಳಿಯುವುದೋ ಇಲ್ಲವೋ ನೋಡೋಣವೆಂದುಕೊಂಡು, ಅವಳ ಗಂಡ ಅದರ ಬೆಲೆ ಎರಡು ಸಾವಿರವೆಂದು ಹೇಳಿದ್ದ.

ಚಿನ್ನದ ಸರ ಹೋಯಿತೆಂದು ತಾಯಾರಮ್ಮ ಹೇಳಿದಾಗ, ಅವಳ ಗಂಡ, "ಹೋದರೆ ಹೋಗಲಿ ಬಿಡು" ಎಂದು ನಿಜಸಂಗತಿ ಹೇಳಿದನು.

"ಗೊತ್ತಾಯಿತೇ ಅಹಲ್ಯಾ. ಈ ಕಳ್ಳತನದಿಂದ ನಿನ್ನ ಗಂಡನ ನಿಜರೂಪ ನಿನಗೆ ತಿಳಿಯುವಂತೆ ಮಾಡಲು ಹಾಗೆಲ್ಲಾ ಹೇಳಿದೆ. ಕಳ್ಳ ಕದ್ದೊಯ್ದ ಅದೇ ಸರ ನಿನ್ನ ಗಂಡನು ತಂದದ್ದು ನೋಡಿ, ನೀನು ಆತನ ಮಾತನ್ನು ನಂಬಿದಿ. ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಅದು ಹೇಗೆ ತಂದರೆಂದು ನಿನಗೆ ಅನುಮಾನ ಬರ

ಬೇಕಿತ್ತು. ಇನ್ನಾದರೂ ಜಾಗರೂಕಳಾಗಿರು. ಜೂಜಿನಲ್ಲಿ ಹಣವನ್ನೆಲ್ಲ ಕಳೆದುಕೊಂಡು, ಸಾಲದಲ್ಲಿ ಬಿದ್ದು ಸ್ವಂತ ಮನೆಯಲ್ಲೇ ಕಳ್ಳತನ ಮಾಡುವಷ್ಟು ಹೀನದಶೆಗೆ ಇಳಿದಿದ್ದಾನೆ ನಿನ್ನ ಗಂಡ" ಎಂದಳು ತಾಯಾರಮ್ಮ.

ಅಹಲ್ಯೆ ಕಣ್ಣೀರು ತುಂಬಿದವಳಾಗಿ, "ತಾಯಾರಮ್ಮಾ, ನೀವು ನನ್ನ ಕಣ್ಣು ತೆರೆಯಿಸಿ ಪುಣ್ಯ ಕಟ್ಟಿಕೊಂಡಿರಿ. ನಿಮ್ಮ ಉಪಕಾರ ಎಂದೆಂದೂ ಮರೆಯಲಾರೆ" ಎಂದು ಮನದುಂಬಿ ಕೃತಜ್ಞತೆ ಹೇಳಿಕೊಂಡು ತನ್ನ ಮನೆಗೆ ಹಿಂದಿರುಗಿದಳು.

ಶೇಷಗಿರಿ ಹೆಂಡತಿಯನ್ನು ನೋಡಿದ ಕೂಡಲೇ, "ತಾಯಾರಮ್ಮ ನೀನು ಕೊಟ್ಟ ಸರವನ್ನು ನೋಡಿ ಏನು ಹೇಳಿದಳು ?" ಎಂದು ಕೇಳಿದನು.

ಅಹಲ್ಯೆ ಉತ್ತರವೇನೂ ಹೇಳದೆ, ಬಿಮ್ಮನೆ ಒಳಗೆ ಹೋಗಿ, ಅಲ್ಲಿ ಇಲ್ಲಿ ಇದ್ದ ತನ್ನ ಸೀರೆ ವಸ್ತ್ರ ರವಿಕೆಗಳನ್ನೆಲ್ಲ ತೆಗೆದು ಪೆಟ್ಟಿಗೆಯಲ್ಲಿ ತುಂಬಿಸತೊಡಗಿದಳು.

ಅದನ್ನು ನೋಡಿ ಶೇಷಗಿರಿ ಬೆರಗಾಗಿ "ಎಲ್ಲಿಗೆ ಪ್ರಯಾಣ ?" ಎಂದನು.

"ನನ್ನಮ್ಮನ ಮನೆಗೆ. ಅವರು ಹೋಗೆಂದರೆ ಬೇರೆಲ್ಲಿಗಾದರೂ ! ಒಬ್ಬ ಜೂಜುಗಾರನಿಗೆ ಹೆಂಡತಿಯಾಗಿ ಬದುಕಿಕೊಂಡಿರಲು ನನ್ನಿಂದಾಗದು. ನನ್ನ ದುರದೃಷ್ಟದಿಂದ ನಿಮ್ಮ ಕೈಹಿಡಿದೆನು. ಹೋಗಲಿ. ಜೂಜುಗಾರನಿಗೆ ಸಮಾಜದಲ್ಲಿರುವ ಗೌರವ ಮರ್ಯಾದೆ ಯಾವ ರೀತಿಯೆಂದು ನನಗೆ ಗೊತ್ತಿದೆ, ಅಂಥಾ ಮರ್ಯಾದೆ ನನಗೆ ಬೇಡಪ್ಪ" ಎಂದಳು ತಿರಸ್ಕಾರಭಾವದಿಂದ.

ಶೇಷಗಿರಿ ಜರ್ರನೆ ಇಳಿದುಹೋದನು. ಹೆಂಡತಿಯ ಬಳಿಗೆ ಬಂದು ಬಹಳ ದೀನಭಾವದಲ್ಲಿ, "ನನ್ನನ್ನು ಕ್ಷಮಿಸು ಅಹಲ್ಯಾ. ನನಗೆ ಹಿಡಿದ ಜೂಜಿನ ಭ್ರಾಂತಿ ಎಷ್ಟೊಂದು ಅಪಾಯಕರವಾದ ರೋಗವೆಂದು ಈಗ ಚೆನ್ನಾಗಿ ಗೊತ್ತಾಯಿತು. ಇನ್ನು ಈ ಜನ್ಮದಲ್ಲಿ ಜೂಜಿನ ಮುಖ ನೋಡಲಾರೆ." ಎಂದು ಹೆಂಡತಿಯ ಕೈಗಳನ್ನು ಹಿಡಿದು ದೇವರ ಮುಂದೆ ಪ್ರಮಾಣ ಮಾಡಿದನು.

ಗಂಡನ ಮಾತಿನ ನಿಜವನ್ನು ಗುರುತಿಸಿದ ಅಹಲ್ಯೆ, "ನನ್ನ ಮೇಲೆ ಕೋಪವಿಲ್ಲವಷ್ಟೆ? ನಾನು ನಿಮ್ಮನ್ನು ಬಿಟ್ಟು ಎಲ್ಲಿಗೆ ತಾನೇ ಹೋಗಲು ಸಾಧ್ಯ ? ದಾರಿ ತಪ್ಪುವ ನಿಮ್ಮನ್ನು ಸರಿದಾರಿಗೆ ತರುವುದು ನನ್ನ ಹೊಣೆ ಎಂದುಕೊಂಡು ಹೀಗೆ ಮಾಡಿದೆ. ನಿಮ್ಮ ಉದ್ಯೋಗದಿಂದ ಬರುವ ಹಣವೇ ನಾವು ನೆಮ್ಮದಿಯಾಗಿ ಬದುಕಲು ಸಾಕು." ಎಂದು ಪೆಟ್ಟಿಗೆಯನ್ನು ಯಥಾ ಸ್ಥಾನದಲ್ಲಿಟ್ಟಳು.

"ನಿನ್ನಂಥ ಉತ್ತಮಳು ಹೆಂಡತಿಯಾದುದು ನನ್ನ ಪುಣ್ಯ. ಇನ್ನೂ ಜೂಜಾಡಬೇಕೆನಿಸಿದರೆ ನಿನ್ನೊಂದಿಗೇ ಆಡುತ್ತೇನೆ." ಎಂದನು ಶೇಷಗಿರಿ ನಗುತ್ತಾ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೩ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. K. Rao



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಅಕ್ಟೋಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಆಗಸ್ಟ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಮೊದಲು ಹತ್ತಿದವನೇ ಗಟ್ಟಿಗ

ಎರಡನೇ ಫೋಟೋ : ಇಬ್ಬರೂ ಗಟ್ಟಿಗರೇ

ಕಳುಹಿಸಿದವರು : ಜನಾರ್ಧನ, ಜನತಾ ಹೋಟಲ್, ೫೮೪ ೧೦೧

ಬಹುಮಾನ ರೂ. ೫೦/- ಈ ತಿಂಗಳ ಅಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಮೆಗಸ್ತನಿಸ್. ಚಂದ್ರಗುಪ್ತಮೌರ್ಯನ ಆಸ್ಥಾನಕ್ಕೆ ಅವನನ್ನು ಕಳುಹಿಸಿದ ಗ್ರೀಕ ಚಕ್ರವರ್ತಿ ಸೆಲ್ಯೂಕಸ್ ನಿಕೆಟರ್. ೨. ಸೈರಸ್ (ಕ್ರಿ. ಪೂ. ೫೫೮-೫೩೦). ೩. ಡೇರಿಯಸ್ (ಕ್ರಿ. ಪೂ. ೫೨೨-೪೮೬). ೪. ಪಾಂಡಿಚೇರಿಗೆ ದಕ್ಷಿಣದಲ್ಲಿರುವ ಸೆಯಿಂಟ್ ಡೇವಿಡ್ ಕೋಟೆ; ಚೆನ್ನಪಟ್ಟಣದಲ್ಲಿರುವ ಸೆಯಿಂಟ್ ಜಾರ್ಜ್ ಕೋಟೆ. ೫. ನೆಪೋಲಿಯನ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಮಾಲ್ಟೋವಾ ಟೋಳಿ–
# ತುಂಬು ಉತ್ಸಾಹದ ತುಂಟರು, ಎಲ್ಲೇನು ಮಾಡುವರೋ ಯಾರು ಬಲ್ಲರು!



ದಿನ ನಿತ್ಯವೂ ನಿಮ್ಮ ಮಕ್ಕಳು ಮಾಲ್ಟೋವಾ ಕುಡಿಯಲಿ—ಜೀವನದ ಸಂಪೂರ್ಣ ಸಾರವನ್ನು ಸವಿಯಲಿ. ಶಾಲೆಯಲ್ಲೂ, ಮನೆಯಲ್ಲೂ ನಕ್ಕು ನಲಿಯಲಿ. ಪೂರ್ಣ ಉತ್ಕೃಷ್ಟತೆಯ ಮಾಲ್ಟೋವಾ, ಮಕ್ಕಳಿಗೆ ಎನ್ನೆಂದೂ ಹಿತಕರ... ಹಾಲಿನೊಂದಿಗೆ ಬೆರೆಸಿದಾಗ ಸಿಗುವ ಪಾನೀಯವಂತೂ ಅತ್ಯಂತ ರುಚಿಕರ.

**ಪ್ರಾಕೃತಿಕವಾಗಿ ಪಕ್ವವಾದ ಗೋಧಿ ಮತ್ತು ಬಾರ್ಲಿ ಮಾಲ್ಟ್**

ಪಂಜಾಬಿನ ಶ್ರೇಷ್ಠ ಗೋಧಿ ಮತ್ತು ಬಾರ್ಲಿ ಮಾಲ್ಟೋವಾ ಕಾರ್ಖಾನೆಯನ್ನು ಸೇರಿ, ಪೌಷ್ಟಿಕ ಮಾಲ್ಟ್ ಆಗಿ ಮಾರ್ಪಡುತ್ತವೆ. ಆವಶ್ಯಕ ಖನಿಜ ಪದಾರ್ಥಗಳು ಮತ್ತು ವಿಟಮಿನ್ B ಸಮೃದ್ಧವಾಗಿರುವ ಮಾಲ್ಟೋವಾ, ದೇಹದಲ್ಲಿ ಸುಲಭವಾಗಿ ಕರಗಬಲ್ಲ ಜೀರ್ಣಕ ಆಹಾರವಾಗಿದೆ.

**ಶುದ್ಧ, ಆರೋಗ್ಯಕರ ಹಾಲು**

ನಮ್ಮ ಸ್ವಂತ ದುಗ್ಧ ಶೇಖರಣಾ ಕೇಂದ್ರಗಳಿಂದ ಬಂದ ಪೌಷ್ಟಿಕ ಹಾಲು ಮಾಲ್ಟೋವಾದಲ್ಲಿ ಸೇರಿದೆ. ಎಂದೆಂದೂ ಇದು ನೂರಕ್ಕೆ ನೂರರಷ್ಟು ಶುದ್ಧ ಹಾಗೂ ಪೌಷ್ಟಿಕ.

**ರುಚಿಕರ ಕೋಕೋ ಸ್ವಾದ**

ಆಮದು ಮಾಡಲಾದ ಉತ್ತಮ ದರ್ಜೆಯ ಕೋಕೋವನ್ನೇ ನಾವು ಬಳಸುತ್ತೇವೆ. ಅಂದರೆ, ಅತ್ಯುತ್ತಮ ರುಚಿ ಮತ್ತು ಅಪಾರ ಪೌಷ್ಟಿಕತೆಯ ಭರವಸೆ ನೀಡುತ್ತೇವೆ. ಕೋಕೋ ನಿಮ್ಮಲ್ಲಿ ಹೊಸ ಚೈತನ್ಯವನ್ನು ತುಂಬಿ, ಶಾರೀರಿಕ ಹಾಗೂ ಮಾನಸಿಕ ನೆಮ್ಮದಿ ಉನ್ನೀಯಲು ಸಹಕರಿಸುತ್ತದೆ.

**ಸಕ್ಕರೆಯಿಂದ ಸಾಮರ್ಥ್ಯ**

ಶುದ್ಧ, ಬಿಳುಪಾದ ಸಕ್ಕರೆ, ನಮ್ಮ ಮಗುವಿನ ಬೆಳೆಯುವ ಎಳೆಯರಲ್ಲಿ ಬೆಟ್ಟದ ಸಾಮರ್ಥ್ಯವನ್ನು ತುಂಬಲು ಶಕ್ಯವಾಗಿದೆ.

**ವಿಟಮಿನ್‌ಗಳ ವಿಶಾಲ ಭಂಡಾರ**

ಪ್ರೊಟೀನ್, ಕಾರ್ಬೋಹೈಡ್ರೇಟ್, ವಿಟಮಿನ್ ಮತ್ತು ಖನಿಜ ಪದಾರ್ಥಗಳ ಅಪೂರ್ವ ಮಿಶ್ರಣವೇ—ಮಾಲ್ಟೋವಾ. ವಿಟಮಿನ್ A, ನಿಯಾಸಿನ್, ವಿಟಮಿನ್ $B_1$ ಮತ್ತು ವಿಟಮಿನ್ $D_3$ ಮಾಲ್ಟೋವಾದಲ್ಲಿ ವಿಪುಲವಾಗಿದೆ. ಯಾವುದೇ ಕೃತಕ ಸ್ವಾದ ಇದರಲ್ಲಿ ಸೇರಿಲ್ಲ.






**JIL** ಜಗತ್‌ಜಿತ್ ಇಂಡಸ್ಟ್ರೀಸ್ ಲಿಮಿಟೆಡ್

ಮಾಂಡೆ (ವಿಶ್ವ) ಆಯ್ಕೆ ಸ್ಪರ್ಧೆಯಲ್ಲಿ ಚಿನ್ನದ ಪದಕಗಳನ್ನು ಗಳಿಸಿದೆ—1981 ಮತ್ತು 1982.

## ವಿಟಮಿನ್-ಭರಿತ ಮಾಲ್ಟೋವಾ: ಆರೋಗ್ಯ, ಬಲ ಮತ್ತು ಶಕ್ತಿಗಾಗಿ

SIMOES/JIL/1/83 KN




೫

[ಪದ್ಮಪಾದನು ಪಿಂಗಳನನ್ನು ಭಲ್ಲೂಕಕೇತುವಿನ ಮಾಯೆಯಲ್ಲಿ ಬೀಳದಂತೆ ರಕ್ಷಿಸಿದ ಮೇಲೆ, ಇಬ್ಬರೂ ಕೂಡಿ ಭಲ್ಲೂಕ ಪರ್ವತಗಳ ಕಡೆಗೆ ಹೊರಟರು. ದಾರಿಯಲ್ಲಿ ಹೊಗೆರೂಪದ ಭಯಂಕರ ಪಿಶಾಚಿಗಳು ಇದಿರಾದುವು. ಮೊಸಳೆ ರೂಪದಲ್ಲಿದ್ದ ಮಹಾಮಾಯನ ಶಿಷ್ಯರು ಪದ್ಮಪಾದನಿಗೆ ಹೆದರಿ ಶರಣಾಗತರಾಗಿ ಸಹಾಯ ಮಾಡಲು ಒಪ್ಪಿಕೊಂಡು ಅದೃಶ್ಯರಾಗಿ ಹೋದರು.]

**ಪಿಂ**ಗಳನನ್ನು ನೋಡಿ ಮಹಾಮಾಯನ ಶಿಷ್ಯರಿಬ್ಬರೂ ಅದೃಶ್ಯರಾಗಿ ಹೋದ ಕೂಡಲೇ, ಪಿಂಗಳನು ಒಂದೂ ಅರ್ಥವಾಗದೆ ಅತ್ಯಾಶ್ಚರ್ಯದಿಂದ ಪದ್ಮಪಾದನನ್ನು ನೋಡಿ, "ಪದ್ಮಪಾದರೇ ! ಇದೀಗ ಮಾಯವಾಗಿ ಹೋದವರು ಏನಾದರು ? ಮೊಸಳೇ ರೂಪಪಡೆದು ಈ ನದಿಯೊಳಗೆ ಹೊಕ್ಕು ಬಿಡಲಿಲ್ಲವಷ್ಟೆ ?" ಎಂದು ಕೇಳಿದನು,

"ಮೊಸಳೆಯಾದರೆನ್ನುವಿಯಾ ? ಅಂತಹ ಸೂಚನೆ ನಿನಗೇನಾದರೂ ಕಂಡಿತೆ ?" ಎಂದು ಪದ್ಮಪಾದನು ಗಾಬರಿ ಬಿದ್ದವನಂತೆ ನದಿಯನ್ನು ನೋಡಿ, ತನ್ನನ್ನು ಸಮಾಳಿಸಿಕೊಂಡು, "ಹಾಗೇನಿಲ್ಲ ಪಿಂಗಳಾ, ಒಂದು ವೇಳೆ ಅವರಿಬ್ಬರೂ ಮತ್ತೆ ಮೊಸಳೆಗಳಾಗಿ ಬಿಟ್ಟರೆ ಕಥೆ ಮೊದಲಿಗೇ ಬರುತ್ತದೆ. ಅವರನ್ನು ಕೈವಶಪಡಿಸಿಕೊಳ್ಳಲು ನನ್ನ ಸಹೋದರರಿಬ್ಬರೂ ಆಹುತಿಯಾದ ಸಂಗತಿ ನಿನಗೆ ಗೊತ್ತಿದೆ. ನಾನು ಕೂಡಾ ಅವರಿಂದ ತಪ್ಪಿಸಿಕೊಂಡು ಕೊನೆಯ ಪ್ರಾಣದೊಂದಿಗೆ ಬದುಕಿ ಹೊರಬಿದ್ದವನು. ಮತ್ತೆ ಅವರು ಮೊಸಳೆಗಳಾಗಿ, ನಿನ್ನಿಂದ ನನ್ನನ್ನು ನೀರಿಗೆ ಬೀಳಿಸಿ ಕೊಲ್ಲಲು ನೋಡುವರೆಂದುಕೊಂಡೆಯಾ?" ಎಂದನು.

"ಹಾಗಾದರೆ ಅವರಿಬ್ಬರೂ ಈಗ ಎಲ್ಲಿಗೆ



ಹೋದರು ? ಯಾವ ರೂಪ ತಾಳಿದರು ?" ಎಂದು ಪಿಂಗಳನು ಪ್ರಶ್ನಿಸಿದನು.

"ಅವರು ಎಲ್ಲಿಗೆ ಯಾವ ರೂಪದಲ್ಲಿ ಹೋದರೆಂಬುದು ಅಷ್ಟೇನೂ ಮುಖ್ಯವಲ್ಲ. ನಾವು ಈ ನದಿಯ ಗರ್ಭದಲ್ಲಿರುವ ಪಾಳುಬಿದ್ದ ದೇವಾಲಯದೊಳಗೆ ಪ್ರವೇಶಿಸಬೇಕಾಗಿದೆ. ಆ ದೇವಾಲಯಕ್ಕಿರುವ ಐದುದ್ವಾರಗಳನ್ನು ತೆರೆದರೆ ಹೊರತು ಮಹಾಮಾಯನು ಸಮಾಧಿಯಾಗಿರುವ ಕೋಣೆಯನ್ನು ತಲಪಲು ಸಾಧ್ಯವಿಲ್ಲ. ಅದಕ್ಕೆ ಆ ಶಿಷ್ಯರು ನಮಗೆ ಸಹಾಯ ಮಾಡುತ್ತಾರೆ. ಮಾಡಲೇಬೇಕು" ಎಂದನು ಪದ್ಮಪಾದ.

"ನನಗೆ ಅಷ್ಟು ಚೆನ್ನಾಗಿ ಈಜಲು ಬಾರದು. ಭಯಂಕರ ಒಯ್ಲಿನ ಪ್ರವಾಹದ ಈ ನದಿಯೊಳಗಿರುವ ಪಾಳು ದೇವಾಲಯವನ್ನು ನಾನು ಹೇಗೆ ಪ್ರವೇಶಿಸಲು ಸಾಧ್ಯ? ನೀರಿನೊಳಗೆ ಉಸಿರು ಕಟ್ಟಿ ಸಾಯಲಾರೆನೆ?" ಎಂದನು ಪಿಂಗಳ.

ಪಿಂಗಳನು ಮುಗ್ಧಭಾವದಿಂದ ಕೇಳಿದ ಪ್ರಶ್ನೆಗೆ ಪದ್ಮಪಾದನು ನಕ್ಕು, "ಪಿಂಗಳಾ, ನಿನಗೆ ಈಜು ಬಾರದೆ ಹೋದರೂ ಗುಂಡಿಗೆಯಲ್ಲಿ ಧೈರ್ಯವಿದ್ದರೆ ಸಾಕು. ಅದು ನಿನ್ನಲ್ಲಿ ಅಪಾರವಾಗಿದೆ. ಮೊದಲು ಈ ನದಿಯಲ್ಲಿ ಒಂದು ಚುಕ್ಕೆ ನೀರಿಲ್ಲದಂತೆ ಮಾಡಬೇಕು. ಅದಕ್ಕೆ ಪ್ರಯತ್ನಿಸಬೇಕಾಗಿದೆ. ಮಹಾಮಾಯನ ಶಿಷ್ಯರಿಬ್ಬರು ಆ ಕಾರ್ಯಕ್ಕೆ ಸಹಾಯ ಮಾಡುತ್ತಾರೆ" ಎಂದನು.

ಪಿಂಗಳನು ಬೆರಗುಗಣ್ಣುಗಳಿಂದ ನದಿಯನ್ನು ನೋಡುತ್ತ, "ಇಷ್ಟೊಂದು ತುಂಬಿ ಹರಿಯುವ ದೊಡ್ಡ ನದಿಯಲ್ಲಿ ಒಂದು ಚುಕ್ಕೆ ನೀರಿಲ್ಲದ ಹಾಗೆ ಮಾಡುವುದೆಂದರೇನು ?" ಎಂದು ಮತ್ತೆ ಆಶ್ಚರ್ಯವನ್ನು ವ್ಯಕ್ತಪಡಿಸಿದನು.

"ಹಾಗೆ ಮಾಡಲೇ ಬೇಕು. ನೀರು ಪೂರ್ತಿ ಬತ್ತಿದರಷ್ಟೇ ನಮ್ಮ ಕಾರ್ಯ ನೆರವೇರುತ್ತದೆ. ನಾನೀಗಲೇ ಮಂತ್ರ ನಿಷ್ಠೆಗೆ ಕುಳಿತುಕೊಳ್ಳಲಿದ್ದೇನೆ. ನನ್ನ ನಿಷ್ಠೆಯನ್ನು ಮಹಾಮಾಯನ ಸ್ವಾಧೀನದಲ್ಲಿರುವ ದುಷ್ಟ ಶಕ್ತಿಗಳು ಹಾಳುಮಾಡಲು ಬಂದಾಗ, ಹಾಗಾಗದಂತೆ ಕಾಪಾಡುವ ಬಾಧ್ಯತೆ ನಿನ್ನದು. ಅಂದರೆ ಒಂದು ವಿಧವಾಗಿ ನೀನೇ ನನ್ನನ್ನು ರಕ್ಷಿಸಬೇಕಾಗಿರುವುದೆಂದಾಯಿತು. ನಿನ್ನ ಜೀವಕ್ಕೆ ಯಾವ ಭಯವೂ ಇಲ್ಲ" ಎಂದನು ಪದ್ಮಪಾದ.

"ನಾನು ನಿಮ್ಮನ್ನು ಕಾಪಾಡುವುದೆ ? ನಂಬಲಾಗದ ಮಾತು" ಎಂದು ಪಿಂಗಳನು ಇನ್ನಷ್ಟು ಕಳವಳ ವ್ಯಕ್ತಪಡಿಸಿದನು.

"ಹೌದಪ್ಪಾ ಪಿಂಗಳಾ, ನೀನೇ ನನ್ನನ್ನು ರಕ್ಷಿಸಬೇಕಾಗಿದೆ. ನಾನು ಮಂತ್ರ ನಿಷ್ಠೆಯಲ್ಲಿರುವಾಗ ನನ್ನ ಸುತ್ತಲೂ ಏನೇನು ನಡೆಯುತ್ತದೆಂಬುದು ನನಗೆ ಗೊತ್ತಾಗುವುದಿಲ್ಲ. ಆದುದರಿಂದ ಆಯುಧಪಾಣಿಯಾಗಿರುವ ನೀನು ಕಣ್ಣಿಗೆ ರೆಪ್ಪೆ ಬಡಿಯದಷ್ಟು ಎಚ್ಚರಿಕೆಯಲ್ಲಿ ನನ್ನನ್ನು ಕಾಪಾಡಿಕೊಂಡಿರ



ಬೇಕು. ಅದಕ್ಕೆ ತಕ್ಕ ಆಯುಧ ಕೊಡುತ್ತೇನೆ. ಇಗೋ, ತೆಗೆದುಕೋ" ಎಂದು ಪದ್ಮಪಾದನು ವಾತಾವರಣ ದೊಳಗೆ ಕೈ ಚಾಚಿ, ಕಣ್ಣು ಕೋರೈಸುವಂತೆ ಜಗ ಜಗನೆ ಹೊಳೆಯುವ ಒಂದು ಗದೆಯನ್ನು ತೆಗೆದು ಪಿಂಗಳನ ಕೈಗೆ ಕೊಟ್ಟನು.

ಆಕಾಶದ ಗಾಳಿಯಿಂದ ತೆಗೆದುಕೊಟ್ಟ ಆ ಗದೆ ಯನ್ನು ಪಿಂಗಳನು ಹಿಡಿದುಕೊಂಡು ಗಿರಗಿರನೆ ತಿರುಗಿಸಿ ನೋಡಿ, ಹೆಗಲ ಮೇಲಿಟ್ಟುಕೊಂಡನು. ಆಗ ತಾನೊಬ್ಬ ಭೀಮನೆಂಬ ವೀರಭಾವ ಅವನಿ ಗುಂಟಾಯಿತು. ಪದ್ಮಪಾದನು ಅವನನ್ನು ಮೆಚ್ಚುಗೆ ಯಿಂದ ನೋಡುತ್ತ, "ನೋಡಿಕೋ, ಪಿಂಗಳಾ. ಇನ್ನು ನಾನು ಧ್ಯಾನಕ್ಕೆ ಕುಳಿತು ಮಂತ್ರೋಚ್ಚಾರ ಮಾಡಿಕೊಂಡಿರುತ್ತೇನೆ. ಬಗೆಬಗೆಯ ಮಾಯಾ ರೂಪಗಳಿಂದ ನಮ್ಮನ್ನು ಕಾಡಿಸಲು ಬರುವ ಮಹಾ ಮಾಯನ ಪಿಶಾಚ ಗಣಗಳಿಂದ ನನ್ನನ್ನು ಮಾತ್ರ ವಲ್ಲದೆ, ನಿನ್ನನ್ನು ಕೂಡಾ ರಕ್ಷಿಸಿಕೊಳ್ಳುವ ಶಕ್ತಿ ನಿನಗಿದೆ. ಎಚ್ಚರದಲ್ಲಿರು. ಬೇಗದಲ್ಲೇ ನದೀ ಜಲ ವನ್ನು ಸ್ತಂಭನಗೊಳಿಸಿ ಇಂಗಿಹೋಗುವಂತೆ ಮಾಡು ತ್ತೇನೆ, ನೋಡು" ಎಂದನು.

"ಆಗಲಿ, ಹಾಗೇ ಆಗಲಿ. ಈ ಗದೆಯ ಸಹಾಯ ದಿಂದ ನಾನು ಎಂತಹ ರಾಕ್ಷಸರನ್ನಾದರೂ ಓಡಿಸಿ ಬಿಡುತ್ತೇನೆ. ಜೈ ಪದ್ಮಪಾದರಿಗೆ!" ಎಂದು ಗದೆ ಯನ್ನು ಕುಣಿಸಿದನು ಪಿಂಗಳ.

ಪದ್ಮಪಾದನು ನದಿಯ ತೀರದಲ್ಲಿ ಪದ್ಮಾಸನ ಹಾಕಿಕೊಂಡು ಕುಳಿತು, ನದಿಯ ಜಲವನ್ನು ಎರಡು ಮೂರು ಸಾರಿ ಕೈಯಿಂದ ಕಲಕಿ "ಚಲನ ಜಲ ಸರ್ವಸ್ವಂ ಸ್ತಂಭನಂ ಕುರುಕುರು! ಶೀಘ್ರಂ ಭವ್ಯಂ ಫಟ್‌ಫಟಃ..." ಎಂದು ಗುಣುಗುತ್ತಾ ಕಣ್ಣು ಮುಚ್ಚಿದನು. ತುಟಿಗಳು ಮಾತ್ರ ಅಲುಗುತ್ತಿದ್ದುವು.

ಪಿಂಗಳನು ನಾಲ್ಕು ಸುತ್ತಲೂ ಮೇಲೂ ಕೆಳಗೂ ನೋಡುತ್ತ ಇದ್ದ ಹಾಗೆ, ಸ್ವಲ್ಪ ಹೊತ್ತಿನಲ್ಲಿ ಭೂಮ್ಯಾಕಾಶಗಳು ಒಂದಕ್ಕೊಂದು ತಾಗಿ ತಿಕ್ಕಿ ಕೊಳ್ಳುತ್ತಿವೆಯೋ ಎಂಬ ಹಾಗೆ ಕೀಚುಕೀಚೆಂಬ ವಿಕೃತ ಧ್ವನಿ ಕೇಳತೊಡಗಿತು. ಪಿಂಗಳನು ಬೆಚ್ಚಿ ಬಿದ್ದು, ಅಷ್ಟರಲ್ಲೇ ಎದೆ ಗಟ್ಟಿಮಾಡಿಕೊಂಡು ಆ ಶಬ್ದ ಎಲ್ಲಿಂದ ಬರುವುದೆಂದು ನೋಡಿದನು. ಗದೆಯನ್ನು ಕೈಯಲ್ಲೆತ್ತಿಕೊಂಡು ಮೇಲೂ ಕೆಳಗೂ ನೋಡಿದನು. ಆ ಶಬ್ದ ಎಲ್ಲಿಂದ ಬರುವುದೆಂದು ಗೊತ್ತೇ ಆಗಲಿಲ್ಲ.

ಥಕ್ಕನೆ ಆಕಾಶವೆಲ್ಲಾ ಕರ್ರಗಿನ ಮೋಡದಿಂದ ಮುಚ್ಚಿಹೋದಂತೆ ತೋರಿತು. ನೋಡುತ್ತಿದ್ದ ಹಾಗೆ ಆ ಮೇಘವು ಕುಂಚಿತಗೊಳ್ಳುತ್ತಾ ಆನೆಯ ಪ್ರಮಾಣಕ್ಕೆ ನಿಂತಿತು. "ಓಹೊ! ಈ ಮೊದಲೊಮ್ಮೆ ನನ್ನನ್ನು ಇದಿರಿಸಿದ ಮಾಯಾಗಜವಿದು! ಮತ್ತೆ ನನ್ನ ಮೇಲೆ ಬರುತ್ತಿದೆಯೇನು!" ಎಂದುಕೊಳ್ಳುತ್ತಾ ಪಿಂಗಳನು ಗದೆಯನ್ನು ಗಟ್ಟಿಯಾಗಿ ಹಿಡಿದು ಕೊಂಡನು. ಆದರೆ ಆ ಮೋಡವು ಆನೆಯ ಆಕೃತಿ ಯಾಗದೆ, ದೊಡ್ಡದೊಂದು ಪಕ್ಷಿಯ ಹಾಗಾಗಿ



ಆಗಲವಾದ ರೆಕ್ಕೆಗಳನ್ನು ಗಾಳಿಯನ್ನು ಸೀಳುವಂತೆ ಅಲುಗಾಡಿಸಲು ತೊಡಗಿತು.

"ಇದು ಪಿಶಾಚಿ ಗಂಡಭೇರುಂಡ ಪಕ್ಷಿ. ಯಾರೋ ಹೇಳುವುದನ್ನು ಕೇಳಿದ್ದೇನೆ. ಹಾಗೆಯೇ ಇದೆ!" ಎಂದುಕೊಂಡನು ಪಿಂಗಳ.

ಗಂಡಭೇರುಂಡ ಪಕ್ಷಿ ದಿಕ್ಕುಗಳು ಗಡಚಿಕ್ಕುವಂತೆ ಚೀಕರಿಸಿಕೊಂಡು ರೆಕ್ಕೆಯಾಡಿಸುತ್ತಾ, ನೆಟ್ಟಗೆ ಪಿಂಗಳನು ನಿಂತಿರುವಲ್ಲಿಗೇ ತಲೆಕೆಳನಾಗಿ ಇಳಿಯ ತೊಡಗಿತು. ಅದು ಕೆಳಕೆಳಗೆ ಬಂದಂತೆ ಅದರ ರೆಕ್ಕೆಗಳ ಹೊಡೆತಕ್ಕೆ, ಆ ಪ್ರಾಂತದಲ್ಲಿರುವ ಮರ ಮಟ್ಟುಗಳು ತುಫಾನಿನ ಹೊಡೆತಕ್ಕೆ ಊಗಾಡುವಂತೆ ತೂಗಿತೂಗಿ ಏಳತೊಡಗಿದುವು.

ಪಿಂಗಳನು ಬೆದರಲಿಲ್ಲ. ಗಟ್ಟಿಯಾಗಿಯೇ ನಿಂತನು. ಆ ಪಕ್ಷಿ ತನ್ನನ್ನು ಕೋಳಿಯ ಮರಿಯನ್ನು ಎತ್ತಿಕೊಳ್ಳುವ ಹಾಗೆ ಎತ್ತಲು ಬರುವುದೆಂದು ಅವನಿಗೆ ಗೊತ್ತು. ಆದರೂ ತನ್ನ ಕೈಯಲ್ಲಿ ಪದ್ಮಪಾದನು ಕೊಟ್ಟ ಅದ್ಭುತ ಶಕ್ತಿಯ ಗದೆಯಿದೆಯಲ್ಲ! ಪಿಂಗಳನು ಸ್ವಲ್ಪವೂ ಹೆದರಲಿಲ್ಲ.

ಪಿಂಗಳನು ಆ ಗದೆಯನ್ನು ಎರಡು ಮುಷ್ಟಿಗಳಲ್ಲಿಯೂ ಬಿಗಿ ಹಿಡಿದು ಮೇಲೆತ್ತಿದ್ದನು. ಪಿಶಾಚಿ ಪಕ್ಷಿ ಅವನನ್ನು ಸಮೀಪಿಸುತ್ತಾಇದೆ. ಹರಿತ ಖಡ್ಗದಂತಹ ಮೂರುದ್ದವಿತ್ತು ಅದರ ಮೂಗು. ಹದನಾದ ಕಾಲುಗುರುಗಳು. ಕೆಂಗಿಡಿಗಳನ್ನುದುರಿಸುವ ಅದರ ಕಣ್ಣುಗಳು. ಭಯಂಕರವಾಗಿ ವಿಕೃತ ರೂಪದ ಹಕ್ಕಿ! ಅದು ಹತ್ತಿರ ಬರುವಾಗ ಅದರ ರೆಕ್ಕೆಗಳಿಂದ ಹೊರಡುವ ಗಾಳಿ ರಿವ್ವರಿವ್ವನೆ ರೀಂಕರಿಸುತ್ತಿದ್ದಿತು. ಅದರ ಶಕ್ತಿಗೆ ಗಟ್ಟಿಯಾಗಿ ನಿಂತ ಪಿಂಗಳನ ಕಾಲುಗಳು ಆಚೀಚೆ ವಾಲುತ್ತಿದ್ದುವು. ಅದರೂ ಸಮಾಳಿಸಿಕೊಂಡು ನಿಂತಾಗ ಆ ಪಕ್ಷಿಯ ಕೊಕ್ಕು ಅವನ ತಲೆಯ ಕಡೆಗೆ ಚಾಚಿಕೊಂಡು ಬಂತು. ಆ ಕ್ಷಣದಲ್ಲಿ ಪಿಂಗಳನು ಕೈಯಲ್ಲಿದ್ದ ಗದೆಯನ್ನು ಬಲವಾಗಿ ಬೀಸಿದನು. ಪಕ್ಷಿ ಅದರ ಪೆಟ್ಟನ್ನು ತಪ್ಪಿಸಿಕೊಂಡು ವಿಕಾರವಾಗಿ ಆರ್ತನಾದ ಮಾಡುತ್ತ ಮೇಲೆ ಹಾರಿಹೋಯಿತು.

"ಬದುಕಿದೆನಪ್ಪ!" ಎಂದು ಪಿಂಗಳನು ಮೇಲೆ ನೋಡಿದನು. ಪಿಶಾಚಿ ಪಕ್ಷಿ ಆಕಾಶದಲ್ಲಿ ಬಹುದೂರ ಹಾರಿಹೋಗಿ, ಮಾಯವಾಗುವುದಕ್ಕೆ ಬದಲಾಗಿ, ಮೊದಲಿಗಿಂತ ವೇಗವಾಗಿ ಕೆಳಗಿಳಿದು ಬರಲು ತೊಡಗಿತು. ಪಿಂಗಳನು ಬೇಗಬೇಗನೆ ತನ್ನ ಬಲವನ್ನೆಲ್ಲಾ ಒಟ್ಟು ಕೂಡಿಸಿಕೊಂಡು, ಪಾದಗಳನ್ನು ಬಲವಾಗಿ ನೆಲದಲ್ಲಿ ಊರಿ ಗದೆಯನ್ನು ಮೇಲೆತ್ತಿ "ಈಗ ಬಾ" ಎನ್ನುತ್ತ ಸಿದ್ಧನಾಗಿ ನಿಂತನು. ಪಕ್ಷಿ ರಿವ್ವನೆ ಅವನ ನಡುನೆತ್ತಿಗೆ ನೇರಾಗಿ ಆಳವಿನೊಳಗೆ ಬರುತ್ತಲೇ ಪಿಂಗಳನು ಗದೆಯನ್ನು ಅದರ ತಲೆಯ ಮೇಲೆ ಬೀಸಿ ಹೊಡೆದನು.

ಢಾಂ ಎಂದು ಬೆಡಿ ಸಿಡಿದಂತಹ ದೊಡ್ಡ ಶಬ್ದ ಹೊರಟಿತು. ಪಿಶಾಚಿ ಪಕ್ಷಿಯ ತಲೆಯೂ ಶರೀರವೂ



ಒಡೆದು ಹೋಗಿತ್ತು. ಅದರ ತಲೆ ಒಂದು ಬದಿಗೂ, ರೆಕ್ಕೆಗಳೂ ಕಾಲುಗಳೂ ಮತ್ತೊಂದು ಬದಿಗೂ ಚೆಲ್ಲಾಚೆದರಾಗಿ ಹಾರಿ, ಮುಂಡವು ನೆಲದ ಮೇಲೆ ಬೊತ್ತನೆ ಬಿತ್ತು.

ಪಿಂಗಳನು ತನ್ನಿಂದಾದ ಅಷ್ಟು ದೊಡ್ಡ ಶತ್ರು ನಾಶವನ್ನು ನೋಡಿ, ಸಂತೋಷವನ್ನು ತಾಳಲಾರದೆ, —"ಜೈ ಪದ್ಮಪಾದಾ!" ಎಂದು ಕೂಗಿ ಗದೆಯನ್ನು ಗಿರಿಗಿರಿ ತಿರುಗಿಸಿಕೊಂಡು ನಲಿದಾಡಿದನು.

ಆಮೇಲೆ ಮಂತ್ರನಿಷ್ಠೆಯಲ್ಲಿರುವ ಪದ್ಮಪಾದನನ್ನು ನೋಡಿದನು. ಅವನಲ್ಲಿ ಯಾವ ಚಲನವೂ ಕಾಣಿಸಲಿಲ್ಲ. ಅವನ ಕಣ್ಣು ಮುಚ್ಚಿಕೊಂಡು, ತುಟಿಗಳು ಮಾತ್ರ ಕದಲಿಕೊಂಡಿದ್ದುವು. "ಅಬ್ಬ! ಈತನಿಗೆ ನಿಷ್ಠಾಭಂಗವಾಗಲಿಲ್ಲ. ಅಷ್ಟು ಸಾಕು. ಅಂಥಾ ಶಬ್ದಕ್ಕೂ ಚಲಿಸಲಿಲ್ಲವೆಂದರೆ ತಪಸ್ಸೆಂದರೆ ಈತನದೇ!" ಎಂದು ಪಿಂಗಳನು ತನಗೆ ತಾನೇ ಹೇಳಿಕೊಂಡನು. ಅಷ್ಟರಲ್ಲಿ ಅವನ ಕಿವಿಗಳಿಗೆ ಘಲ್ಲು ಘಲ್ಲನೆ ಗೆಜ್ಜೆಗಳ ನಿನಾದವು ಕೇಳತೊಡಗಿತು.

ಥಕ್ಕನೆ ಪಿಂಗಳನು ನಿಶ್ಚೇಷ್ಟಿತನಾಗಿ ನೋಡುತ್ತ ನಿಂತನು. ಅವನ ಇದಿರಿನಲ್ಲಿ ಸರ್ವಾಲಂಕಾರ ಭೂಷಿತಳಾದ, ಅಪ್ಸರಸಿಯನ್ನು ನಾಚಿಸುವಂತಹ ಯುವತಿಯೊಬ್ಬಳು ನಾಟ್ಯವಾಡುತ್ತ ಇನಿಗೊರಳಿನಿಂದ ಹಾಡತೊಡಗಿದಳು. ಅವಳ ಸೌಂದರ್ಯವನ್ನೂ, ಗಂಧರ್ವಗಾನವನ್ನೂ ಕೇಳಿದಾಗ ಪಿಂಗಳನಿಗೆ ಕ್ಷಣ ಕಾಲ ಮೈಮರೆತುಹೋಯಿತು.

ಆಗ ಯುವತಿ ಮಂಜುಲ ಕಂಠದಿಂದ, "ಪಿಂಗಳಾ, ನಿನ್ನ ಅಂದವಾದ ಸೊಬಗನ್ನು ನೋಡಿ ನಾನು ಇಲ್ಲಿಗೆ ಬಂದಿದ್ದೇನೆ. ನನ್ನನ್ನು ಮದುವೆ ಮಾಡಿಕೊಂಡು ಬಿಡು. ಈ ಮದುವೆಗೆ ಗಾಂಧರ್ವ ವಿವಾಹವೆಂದು ಶಾಸ್ತ್ರ ಸಮ್ಮತವಾದ ಹೆಸರಿದೆ. ನನ್ನಿಂದ ನಿನಗೆ ಬೇಕು ಬೇಕಾದ ಸಂಪತ್ತುಗಳೂ ಒದಗುತ್ತವೆ" ಎಂದಳು.

ಈ ಸಮಯದಲ್ಲಿ ಪಿಂಗಳನು ತನ್ನನ್ನು ತಾನು ಸಮಾಧಾನಪಡಿಸಿಕೊಂಡು, "ಏನು ಹೇಳಿದಿ? ನನ್ನ ಅಂದವನ್ನು ನೋಡಿ ನೀನು ಬಂದಿಯೇನು? ನಾನು ಯಾವ ರಾಜನ ಕುಮಾರನೋ ಎಂದು ಅಂದುಕೊಂಡೆಯಾ? ಹಾಗೆಲ್ಲಾ ಭ್ರಮೆಗೆ ಬೀಳಬೇಡ. ನಾನು ಬಲೆಗಾರ ಪಿಂಗಳ, ಅಷ್ಟೇ" ಎಂದನು.

"ವೃತ್ತಿಯಲ್ಲಿ ಬಲೆಗಾರ ಬೆಸ್ತನಾದ ಮಾತ್ರಕ್ಕೆ ಏನು ಕಡಿಮೆಯಾಯಿತು? ನಿನ್ನಂಥಾ ಸುಂದರ ಪುರುಷನು ಹದಿನಾಲ್ಕು ಲೋಕಗಳಲ್ಲಿಯೂ ಇರಲಾರನು" ಎಂದು ಯುವತಿ ನಾಟ್ಯವಾಡಲು ತೊಡಗಿದಳು.

ಪಿಂಗಳನು ಅವಳನ್ನು ಅನುಮಾನದಿಂದ ನೋಡುತ್ತ, "ನಿನ್ನ ಕಂಠಸ್ವರದೊಂದಿಗೆ ಶ್ರುತಿಗೆ ಸೇರುವ ಹಾಗೆ ಅನೇಕ ಪಕ್ಕ ವಾದ್ಯಗಳು ಕೂಡಾ ಕೇಳುತ್ತಿವೆಯಲ್ಲ? ಆ ವಾದ್ಯದವರು ನನ್ನ ಕಣ್ಣಿಗೆ ಕಾಣುವುದಿಲ್ಲವೇಕೆ?" ಎಂದನು.




"ನನ್ನನ್ನು ಮದುವೆ ಮಾಡಿಕೊಂಡರಷ್ಟೇ ಅವರೆಲ್ಲಾ ಕಾಣಿಸುವರು. ನಾನು ಖೇಚರಿ ಹೆಣ್ಣು! ನನ್ನನ್ನು ಮದುವೆಯಾದರೆ ನೀನೂ ಖೇಚರನಾಗಿ ಆಕಾಶದಲ್ಲಿ ಹಾರಾಡಬಹುದು" ಎಂದಳು ಅವಳು.

"ಖೇಚರಿಯೇ? ಓಹೋ! ಹರಿಕಥೆಯಲ್ಲಿ ಕೇಳಿದ್ದೇನೆ. ಆಕಾಶದಲ್ಲಿ ಸಂಚರಿಸುವ ಗಂಧರ್ವ ಹುಡುಗಿಯೋ?" ಎಂದು ಪಿಂಗಳನು ಗದೆಯನ್ನೆತ್ತಿ ಕೊಂಡು ಅವಳನ್ನು ಸಮೀಪಿಸಲು ಎರಡಡಿ ಮುಂದಿಟ್ಟನು.

"ತಡಿ ತಡಿ! ಮೊದಲು ಆ ಗದೆಯನ್ನು ದೂರ ಬಿಸುಡು. ನನಗೆ ಆಯುಧಗಳೆಂದರೆ ಕೆಟ್ಟ ಭಯ!" ಎಂದು ಖೇಚರಿ ಹಿಂದಕ್ಕೆ ನಡೆದಳು.

ಆ ಮಾತು ಕೇಳಿ ಅವಳು ಯಾರೆಂದು ಪಿಂಗಳನಿಗೆ ಗೊತ್ತಾಗಿಬಿಟ್ಟಿತು. ಪದ್ಮಪಾದನಿಗೆ ನಿಷ್ಠಾಭಂಗವಾಗ ದಂತೆ, ನೋಡಿಕೊಂಡಿರುವ ತನ್ನನ್ನು ಮೊದಲು ಮಾಯಮಾಡಿ ಸಂಹರಿಸಲು ಬಂದ ಪಿಶಾಚಿಯೇ ಇವಳು ಎಂದು ಗೊತ್ತಾಯಿತು. ಅವನು ಉಕ್ಕುತ್ತಿ ರುವ ಕೋಪವನ್ನು ಅಡಗಿಸಿ, ಇಲ್ಲದ ಸಂತೋಷ ವನ್ನು ಬರಮಾಡಿಕೊಂಡು, "ಓ ಖೇಚರಕಾಂತಾ ಮಣೀ! ನಿನ್ನನ್ನು ಮದುವೆಯಾಗಲು ನನ್ನ ಅಭ್ಯಂತರವೇನೂ ಇಲ್ಲ. ಇದೊಂದು ನನ್ನ ಭಾಗ್ಯವೇ ಸರಿ. ಆದರೆ ಸಮಯಕ್ಕೆ ಇಲ್ಲಿ ನನ್ನ ಮುತ್ತಾತ ನವರ ಮೂರನೇ ಪತ್ನೀಮಣಿ ಇಲ್ಲವೆಂದು ಚಿಂತಿಸುತ್ತಿದ್ದೇನೆ. ನನ್ನನ್ನು ಪೋಷಿಸಿ ಬೆಳೆಸಿ ದೊಡ್ಡವ ನಾಗಿ ಮಾಡಿದವಳು ಆಕೆಯೇ. ಆದರೂ ಪರವಾಗಿಲ್ಲ ಅನ್ನು. ನಮ್ಮ ವಂಶಾಚಾರದ ಪ್ರಕಾರ ಈ ಗದೆ ಯಿಂದ ಒಂದು ಸಾರಿ ನಿನ್ನ ತಲೆಯನ್ನು ತಡವಿ ಬಿಡುತ್ತೇನೆ. ತಲೆಬಾಗು. ಮದುವೆಯಾಗೋಣ" ಎನ್ನುತ್ತಾ ಮುಂದಡಿ ಇಟ್ಟನು.

ಖೇಚರಿ ಕಿರ್ರನೆ ಕಿರಿಚಿ ಹಿಂದೆ ಓಡಲು ನೋಡಿ ದಳು. ಅಷ್ಟರೊಳಗೆ ಪಿಂಗಳನು ತನ್ನ ಗದೆಯಿಂದ ಅವಳ ನೆತ್ತಿಯ ಮೇಲೆ ಒಂದೇಟು ಹಾಕಿಯಾಗಿತ್ತು! ಮರುಕ್ಷಣದಲ್ಲಿ ದೊಡ್ಡದೊಂದು ಆರ್ಭಟೆ! ಮಾಯಾ ಸುಂದರೀ ರೂಪದ ಆ ಪಿಶಾಚಿ ಕೂಡಾ ಚೂರುಚೂರಾಗಿ ಆಕಾಶದಲ್ಲಿ ಎಂಟು ದಿಕ್ಕುಗಳಿಗೂ ಹಾರಿ ಮಾಯವಾಯಿತು.

ಪಿಂಗಳನು ದೊಡ್ಡದನಿಯಿಂದ ನಗುತ್ತ ಹಿಂದಿ ರುಗಿ ಪದ್ಮಪಾದನ ಬಳಿಗೆ ಬಂದನು. ಇನ್ನೂ ಪದ್ಮಪಾದನು ಧ್ಯಾನ ನಿಷ್ಠೆಯಲ್ಲೇ ಇದ್ದಾನೆ. ಪಿಂಗಳನ ಕಣ್ಣು ನದಿಯ ಕಡೆಗೆ ಹೋಯಿತು. ಅವನಿಗಾದ ಆಶ್ಚರ್ಯಕ್ಕೆ ಅಂತ್ಯವೇ ಇರಲಿಲ್ಲ. ನದಿಯಲ್ಲಿ ನೀರು ಹರಿಯುವುದು ನಿಂತು ತಳದಿಂದ ತಳಕ್ಕೆ ಇಂಗಿ ಹೋಗುತ್ತಾ ಇದೆ. ಅದುವರೆಗೂ ಆ ನೀರಿ ನಲ್ಲಿ ವಾಸವಾಗಿದ್ದ ಜಲಚರಗಳು ಗುಂಪು ಗುಂಪಾಗಿ ನೆಲಕ್ಕೆ ಹಾರುತ್ತ ಅತ್ತಿತ್ತ ಎಗರಾಡಿಕೊಂಡಿವೆ.

ಆಶ್ಚರ್ಯದಿಂದ ಮೈಮರೆತು ನೋಡುತ್ತಿದ್ದವ ನನ್ನು "ಪಿಂಗಳಾ!" ಎಂಬ ಪದ್ಮಪಾದನ ಧ್ವನಿ

ಎಚ್ಚರಿಸಿತು. ಪದ್ಮಪಾದನು ಕಣ್ಣುಗಳನ್ನು ತೆರೆದಿದ್ದನು. ಪಿಂಗಳನು ಅವನ ಬಳಿಗೆ ಹಾರಿ "ಪದ್ಮಪಾದರೇ! ನದಿಯನ್ನು ನೋಡಿರಿ!" ಎಂದನು.

ಪದ್ಮಪಾದನು ನದಿಯ ಕಡೆಗೆ ದೃಷ್ಟಿ ಹಾಯಿಸಿ, "ಭೇಷ್! ಮಹಾಮಾಯನ ಶಿಷ್ಯರು ಹೇಳಿದ ಮಾತು ಉಳಿಸಿಕೊಂಡರು. ನಮಗೆ ಬೇಕಾದ ಪಾಳು ಬಿದ್ದ ದೇವಾಲಯವೆಲ್ಲಿದೆ?" ಎಂದನು.

ಪಿಂಗಳನು ನದಿಯ ಮಧ್ಯಭಾಗವನ್ನು ಪರೀಕ್ಷಿಸಿ ನೋಡುತ್ತ, "ಅದೋ ನೋಡಿದಿರಾ! ಈಗಲೀಗ ಶಿಖರಭಾಗವು ನೀರಿನಿಂದ ಮೇಲೆ ಬರುತ್ತಾ ಇದೆ. ಅದೇನಾ ಮಹಾಮಾಯನು ಸಮಾಧಿ ಹೊಂದಿದ ದೇವಾಲಯ?" ಎಂದು ಕೇಳಿದನು.

ಪದ್ಮಪಾದನು ಪಿಂಗಳನು ತೋರಿಸಿದ ದಿಕ್ಕನ್ನು ನೋಡಿ, ತೃಪ್ತಿಯ ನಗುವಿನೊಂದಿಗೆ, "ಅದೇ ಪಾಳು ಬಿದ್ದ ದೇವಾಲಯ. ನದಿಯ ನೀರೆಲ್ಲಾ ಒಂದು ಚುಕ್ಕೆ ಕೂಡಾ ಇಲ್ಲದಂತೆ ಇಂಗಿ ಹೋದ ಮೇಲೆ, ಮಹಾಮಾಯನ ಶಿಷ್ಯರಿಬ್ಬರೂನಮ್ಮ ಹತ್ತಿರ ಬರುತ್ತಾರೆ. ಅದಿರಲಿ. ನಾನು ನಿಷ್ಠೆಯಲ್ಲಿರುವಾಗ, ಅದನ್ನು ಭಗ್ನಪಡಿಸಲು ಪಿಶಾಚಿಗಳೇನೂ ಬರಲಿಲ್ಲವಷ್ಟೆ?" ಎಂದು ಕೇಳಿದನು.

ಪಿಂಗಳನು ಹೆಮ್ಮೆಯಿಂದಲೂ ಸಂತೋಷದಿಂದಲೂ ತಾನು ಸಂಹರಿಸಿದ ಗಂಡಭೇರುಂಡ ಪಕ್ಷಿಯನ್ನೂ, ಮಾಯದ ಸುಂದರಾಂಗಿಯನ್ನೂ ಕುರಿತು ವಿವರಿಸಿ ಹೇಳಿದನು. ಪದ್ಮಪಾದನು ಮೆಚ್ಚುಗೆಯಿಂದ ಪಿಂಗಳನ ಭುಜ ತಟ್ಟುತ್ತ, "ಪಿಂಗಳಾ, ಗಂಧರ್ವಸ್ತ್ರೀಯ ರೂಪದಲ್ಲಿ ಬಂದ ಪಿಶಾಚಿನಿಯ ಸೌಂದರ್ಯಕ್ಕೆ ವಶನಾಗದೆ ನಿನ್ನನ್ನು ನೀನು ನಿಗ್ರಹಿಸಿಕೊಂಡದ್ದು ಬಹು ದೊಡ್ಡ ವಿಷಯ. ಇದು ನನಗೆ ಬಹಳ ಆನಂದವನ್ನುಂಟುಮಾಡಿದೆ. ನೀನು ಪಾಳುದೇಗುಲದೊಳಗೆ ಪ್ರವೇಶಿಸುವಾಗಲೂ ಇಂತಹವೇ ಆದ ಕೆಲವು ಪರೀಕ್ಷೆಗಳನ್ನು ಇದಿರಿಸಬೇಕಾಗಿ ಬರುತ್ತದೆ. ನೀನು ಖಂಡಿತಾ ಗೆಲ್ಲುವಿ ಎಂಬ ನಂಬುಗೆ ನನಗಾಗಿದೆ. ಆದರೂ ಜಾಗ್ರತೆಯಿಂದಿರು" ಎಂದನು.

ಅಷ್ಟರಲ್ಲಿ ನದಿಯ ಮಧ್ಯದಿಂದ "ಓ ಮಹಾಮಾಂತ್ರಿಕಾ! ಇತ್ತ ನೋಡಿರಯ್ಯಾ!" ಎಂಬ ಜೋಡು ಕಂಠಗಳಿಂದ ಹೊರಟ ದೊಡ್ಡದೊಂದು ಕೂಗು ಕೇಳಿತು.

ಪದ್ಮಪಾದನೂ ಪಿಂಗಳನೂ ಆಕಡೆಗೆ ನೋಡಿದರು. ಒಂದು ದೇವಾಲಯದ ಶಿಖರವು ಅವರ ದೃಷ್ಟಿಯನ್ನು ಆಕರ್ಷಿಸಿತು. ಅದರ ಪಕ್ಕದಲ್ಲಿ ನಿಂತಿರುವ ಮಹಾಮಾಯನ ಶಿಷ್ಯರಿಬ್ಬರೂ ಕಣ್ಣಿಗೆ ಬಿದ್ದರು. ಅವರು ಪದ್ಮಪಾದನ ಕಡೆಗೇ ನೋಡಿಕೊಂಡಿದ್ದರು.

(ಇನ್ನೂ ಇದೆ)

